# ಕನ್ನಡದ ವ್ಯಾಕರಣ ಪರಂಪರೆ

ಡಿ. ಎನ್. ಶಂಕರ ಭಟ್




ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬



# ಕನ್ನಡದ ವ್ಯಾಕರಣ ಪರಂಪರೆ

ಡಿ. ಎನ್. ಶಂಕರ ಭಟ್




ಪ್ರಸಾರಾಂಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩ ೨೨೧

**KANNADA VYAKARANA PARAMPARE** (Kannada Grammatical Tradition) D N Shankara Bhat, Central Institute of Indian Langugare, Manasagangotri, Mysore - 570 006. Published by The Director, Prasaranga, Kannada University Hampi, Vidyaranya, Kamalapura - 583 221. First Edition 1994, Pp. ii + 25, Rs.2.00.

**ಮಂಟಪಮಾಲೆ ೧೬**



ಮುಖಪುಟ ವಿನ್ಯಾಸ : ಕೆ ಮಕಾಳಿ

ಡಿ ಟಿ ಪಿ ಸಂಯೋಜನೆ : ಅನಿತಾ ಬೊಥೆಲೊ

**ಪ್ರಕಾಶಕರು**
ನಿರ್ದೇಶಕರು
ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ, ಕಾಮಲಾಪುರ ೫೮೩ ೨೨೧

ಶಿಫಾರಸ್ಸಾದ ವರ್ಗೀಕರಣ ಮತ್ತು ಸೂಚೀಕರಣ
**ಶಂಕರ ಭಟ್** (ಡಿ ಎನ್)
ಕನ್ನಡದ ವ್ಯಾಕರಣ ಪರಂಪರೆ
ಹಂಪಿ ಕನ್ನಡ ವಿಶ್ವವಿದ್ಯಾಲಯ ೧೯೯೪
4K5 SHA

**ಬೆಲೆ** : ೨.೦೦

**ಮುದ್ರಕರು:**

ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ

ಕನ್ನಡದಲ್ಲಿ ಇದಕ್ಕಾಗಿ ಕ್ರಿಯಾಪದಗಳ ನ್ಯೂನರೂಪಗಳನ್ನು ಬಳಸಲಾಗುತ್ತದೆ. ಇಂತಹ ರೂಪಗಳಲ್ಲಿ ಕನ್ನಡವು ಮೂರು ಬೇರೆಬೇರೆ ಕಾಲಸಂಬಂಧೀ ಪ್ರತ್ಯಯಗಳನ್ನು ಉಪಯೋಗಿಸುತ್ತದೆ. ಉದಾಹರಣೆಗಾಗಿ, **ಒಡೆದು ತರುತ್ತೇನೆ, ಒಡೆಯುತ್ತಾ ತರುತ್ತೇನೆ** ಮತ್ತು **ಒಡೆಯಲು ತರುತ್ತೇನೆ** ಎಂಬ ಕ್ರಿಯಾರೂಪಗಳಲ್ಲಿ **ಒಡೆ** ಎಂಬ ಕ್ರಿಯಾಪದಕ್ಕೆ ಹೀಗೆ **ತರು** ಎಂಬ ಘಟನೆಗೆ ಮೊದಲೇ, ಅದರೊಂದಿಗೆ ಮತ್ತು ಅದರ ಅನಂತರ ನಡೆಯುವ ಘಟನೆ ಎಂಬ ಅರ್ಥಗಳನ್ನು ಕೊಡುವ ಮೂರು ಬೇರೆಬೇರೆ ರೂಪಗಳಿವೆಯೆಂಬುದನ್ನು ಗಮನಿಸಬಹುದು.

ಘಟನೆಯೊಂದರ ಆಂತರಿಕ ಕಾಲರಚನೆಯೆಂತಹದು ಎಂಬುದನ್ನು ತಿಳಿಸುವ "ಕಾಲರಚನೆ"ಯ (aspect) ಪ್ರತ್ಯಯಗಳು ಇನ್ನೊಂದು ರೀತಿಯವು. ಘಟನೆಯೊಂದನ್ನು ಒಂದು ಸಂಪೂರ್ಣ ಘಟಕವನ್ನಾಗಿ ವರದಿ ಮಾಡಬಹುದು. ಇಲ್ಲವೇ ಆದಿ, ಮಧ್ಯ ಮತ್ತು ಅಂತ್ಯಗಳಿರುವ ಒಂದು ವಿಸ್ತೃತ ಘಟಕವನ್ನಾಗಿ ಕೂಡ ವರದಿ ಮಾಡಬಹುದು. ಇಂಗ್ಲಿಷ್‌ನಲ್ಲಿ ಈ ಎರಡು ರೀತಿಯ ಕಾಲರಚನಾ ಭೇದವನ್ನು perfect ಮತ್ತು imperfect ಎಂಬ ಹೆಸರಿನಿಂದ ಕರೆಯುತ್ತಾರೆ. ಸಂಸ್ಕೃತ ವ್ಯಾಕರಣದಲ್ಲೂ ಕೂಡ ಲಟ್ ಮತ್ತು ಲಿಟ್ ಎನ್ನುವ ಕ್ರಿಯಾರೂಪಗಳು ಈ ಎರಡು ಕಾಲರಚನೆಗಳನ್ನು ಪ್ರತಿನಿಧೀಕರಿಸುತ್ತವೆ. ಇದಲ್ಲದೆ, ಬೇರೆಯೂ ಹಲವಾರು ರೀತಿಯ ಕಾಲರಚನಾ ವೈವಿಧ್ಯಗಳನ್ನು ವ್ಯಾಕರಣದಲ್ಲಿ ಕಾಣಬಹುದು. ಉದಾಹರಣೆಗಾಗಿ, ಕ್ರಿಯೆಯು ಒಮ್ಮೆ ಮಾತ್ರ ನಡೆಯುವುದೇ (simulfactive) ಅಥವಾ ಹಲವು ಬಾರಿ ನಡೆಯುವುದೇ (iterative) ಎಂಬುದನ್ನು ತಿಳಿಸುವ ಪ್ರತ್ಯಯಗಳು ಈ ವಿಭಾಗಕ್ಕೆ ಸೇರುತ್ತವೆ.

ಈ ಎರಡು ರೀತಿಯ ಕಾಲವಾಚಕ ಪ್ರತ್ಯಯಗಳು ಮಾತ್ರವಲ್ಲದೆ, ಘಟನೆಯ ಯಥಾರ್ಥತೆಯನ್ನು ಸೂಚಿಸುವ (mood) ಪ್ರತ್ಯಯಗಳೂ ಕೂಡ ಕ್ರಿಯಾಪದದೊಂದಿಗೆ ಬರಲು ಸಾಧ್ಯವಿದೆ. ಯಥಾರ್ಥ (realis) ಮತ್ತು ಅಯಥಾರ್ಥ (irrealis) ಎಂಬ ಭೇದ ಮಾತ್ರವಲ್ಲದೆ, ಘಟನೆಯೊಂದನ್ನು ವರದಿಮಾಡಲು ಯಾವ ರೀತಿಯ ಆಧಾರ ಇಲ್ಲವೇ ಪ್ರಮಾಣವಿದೆ (ಪ್ರತ್ಯಕ್ಷವೇ, ಅನುಮಾನವೇ, ಇನ್ನೊಬ್ಬರು ಹೇಳಿದುದರಿಂದಾಗಿ ತಿಳಿದುದೇ ಇತ್ಯಾದಿ) ಎಂಬುದನ್ನು ತಿಳಿಸುವಂತಹ ಪ್ರತ್ಯಯಗಳೂ ಕೂಡ ಈ ವಿಭಾಗಕ್ಕೆ ಸೇರುವ ಕಾಲವಾಚಕ ಪ್ರತ್ಯಯಗಳು.

ನಿಜಕ್ಕೂ ಈ ಗ್ರಂಥಗಳು ಮತ್ತು ಲೇಖನಗಳು ಕನ್ನಡ ವ್ಯಾಕರಣದ ಒಳಗುಟ್ಟನ್ನು ತಿಳಿಸಿಕೊಡುವಲ್ಲಿ ಎಷ್ಟರ ಮಟ್ಟಿಗೆ ಸಮರ್ಥವಾಗಿವೆ ಎಂಬುದನ್ನು ವಿಮರ್ಶಿಸುವುದು ಅವಶ್ಯ. ಇದಕ್ಕಾಗಿ ಈ ಅಧ್ಯಯನಗಳನ್ನು ಮೂರು ಮುಖ್ಯ ಪರಂಪರೆಗಳಲ್ಲಿ ರಚಿತವಾದವುಗಳೆಂದು ವಿಂಗಡಿಸಿ ಪರಿಶೀಲಿಸಬಹುದು.

ಪಾಣಿನಿಯ ಸಂಸ್ಕೃತ ವ್ಯಾಕರಣದ ಪರಂಪರೆಯಲ್ಲಿ ರಚಿತವಾದ ಕೇಶಿರಾಜನ ಶಬ್ದ ಮಣಿದರ್ಪಣ, ಭಟ್ಟಾಕಳಂಕನ ಶಬ್ದಾನುಶಾಸನ ಮತ್ತು ಇನ್ನಿತರ ಹಲವಾರು ಹಳೆಗನ್ನಡ ವ್ಯಾಕರಣ ಗ್ರಂಥಗಳು ಒಂದು ವಿಭಾಗಕ್ಕೆ ಸೇರುವುದಾದರೆ, ಹತ್ತೊಂಬತ್ತನೇ ಶತಮಾನದಿಂದ ಈಚೆಗೆ ಮುಖ್ಯವಾಗಿ ಕ್ರಿಶ್ಚಿಯನ್ ಮಿಶನರಿಗಳು ಇಂಗ್ಲಿಷಿನಲ್ಲಿ ಬರೆದಿರುವ ಹೊಸಗನ್ನಡದ ವ್ಯಾಕರಣಗಳು ಯೂರೋಪಿನ ವ್ಯಾಕರಣ ಪರಂಪರೆಯಲ್ಲಿ ಸಿದ್ಧವಾಗಿದ್ದು ಎರಡನೆಯ ವಿಭಾಗಕ್ಕೆ ಸೇರುತ್ತವೆ. ಆದರಿಂದೀಚೆಗೆ ಆಧುನಿಕ ಭಾಷಾವಿಜ್ಞಾನಿಗಳು ರಚಿಸಿರುವ ವ್ಯಾಕರಣ ಗ್ರಂಥಗಳು ಮತ್ತು ಲೇಖನಗಳು ಮುಖ್ಯವಾಗಿ ಅಮೇರಿಕದ ಇಂಗ್ಲಿಷ್ ವ್ಯಾಕರಣ ಪರಂಪರೆಯಲ್ಲಿ ಸಿದ್ಧ ವಾಗಿದ್ದು ಮೂರನೆಯ ವಿಭಾಗಕ್ಕೆ ಸೇರುತ್ತವೆ.

ಈ ಮೂರು ವ್ಯಾಕರಣ ಪರಂಪರೆಗಳಲ್ಲೂ ನಮಗೆ ಕಂಡುಬರುವ ಒಂದು ಮುಖ್ಯಸಂಗತಿಯೇನೆಂದರೆ, ಇವು ಬೇರಾವುದೋ ಒಂದು ಭಾಷೆಯ (ಎಂದರೆ ಸಂಸ್ಕೃತ, ಲ್ಯಾಟಿನ್ ಇಲ್ಲವೇ ಇಂಗ್ಲಿಷ್ ಭಾಷೆಯ) ವ್ಯಾಕರಣ ಪರಂಪರೆಯನ್ನು ಅನುಸರಿಸಲು ಪ್ರಯತ್ನಿಸಿವೆಯಲ್ಲದೆ ಕನ್ನಡಕ್ಕೆ ಅನುರದೇ ಆದ ಒಂದು ವ್ಯಾಕರಣ ಪರಂಪರೆಯನ್ನು ಸಾಧಿಸಿಕೊಡಲು ಪ್ರಯತ್ನಿಸಿಲ್ಲ. ಈ ಎಲ್ಲಾ ವ್ಯಾಕರಣಗಳಲ್ಲೂ ಇದೊಂದು ಎದ್ದು ಕಾಣುವ ಕೊರತೆಯೆಂದು ನನ್ನ ಅಭಿಪ್ರಾಯ. ಇದಲ್ಲದೆ, ಸಂಸ್ಕೃತ, ಲ್ಯಾಟಿನ್ ಮತ್ತು ಇಂಗ್ಲಿಷ್ ಇವು ಮೂರೂ ಇಂಡೋ ಯುರೋಪಿಯನ್ ಎಂಬ ಒಂದೇ ಭಾಷಾ ಕುಟುಂಬಕ್ಕೆ ಸೇರಿದ ಭಾಷೆಗಳು. ಇವು ಸ್ವತಂತ್ರ ಭಾಷೆಗಳಾಗಿದ್ದು ಒಂದರಿಂದೊಂದು ಸಾಕಷ್ಟು ಭಿನ್ನವಾಗಿವೆಯಾದರೂ, ಇವುಗಳ ವ್ಯಾಕರಣದ ಮೂಲ ಸೂತ್ರಗಳು ಹೆಚ್ಚು ಕಡಿಮೆ ಒಂದೇ ಆಗಿವೆಯಾದ್ದರಿಂದ, ಈ ಮೂರು ವ್ಯಾಕರಣ ಪರಂಪರೆಗಳೂ ಹೆಚ್ಚು ಕಡಿಮೆ ಒಂದೇ ಪರಂಪರೆಯ ಮೂರು ಪ್ರಭೇದಗಳೆಂದು ಭಾವಿಸಬಹುದು.

ಕನ್ನಡ ಭಾಷೆ ಇದಕ್ಕೆ ತೀರ ಭಿನ್ನವಾದ ದ್ರಾವಿಡ ಭಾಷಾ ಕುಟುಂಬಕ್ಕೆ ಸೇರಿದ ಭಾಷೆ. ಇದರ ವ್ಯಾಕರಣದ ಮೂಲಸೂತ್ರಗಳು ಸಂಸ್ಕೃತ, ಇಂಗ್ಲಿಷ್ ಮೊದಲಾದ ಇಂಡೋ ಯುರೋಪಿಯನ್ ಭಾಷೆಗಳಲ್ಲಿ ಕಾಣಿಸುವ ವ್ಯಾಕರಣದ ಮೂಲಸೂತ್ರಗಳಿಗಿಂತ ತೀರ ಭಿನ್ನವಾದವುಗಳು. ಇವುಗಳನ್ನು ಸರಿಯಾಗಿ

ತಿಳಿದುಕೊಳ್ಳಬೇಕಾದರೆ ಕನ್ನಡದ್ದೇ ಆದ ವ್ಯಾಕರಣ ಪರಂಪರೆಯೊಂದನ್ನು ಸಿದ್ಧಪಡಿಸಿಕೊಳ್ಳುವುದು ಅತ್ಯವಶ್ಯ. ಸಂಸ್ಕೃತ ಇಲ್ಲವೇ ಇಂಗ್ಲಿಷ್ ವ್ಯಾಕರಣ ಪರಂಪರೆಯಲ್ಲಿ ಬರೆದ ಗ್ರಂಥಗಳು ಮತ್ತು ಲೇಖನಗಳು ಇಂತಹ ಕನ್ನಡದ್ದೇ ಆದ ವೈಶಿಷ್ಟ್ಯಗಳಿಗೆ ಹೆಚ್ಚಿನ ಗಮನ ಕೊಡಲಾರವು.

ಹೀಗೆ ಸಿದ್ಧಪಡಿಸಬೇಕಾಗಿರುವ ಕನ್ನಡದ ವ್ಯಾಕರಣ ಪರಂಪರೆ ಸಂಸ್ಕೃತ ಮತ್ತು ಇಂಗ್ಲಿಷ್ ವ್ಯಾಕರಣ ಪರಂಪರೆಗಳಿಗಿಂತ ಯಾವ ಯಾವ ರೀತಿಯಲ್ಲೆಲ್ಲ ಭಿನ್ನವಾಗಿರಲು ಸಾಧ್ಯ ಎಂಬದನ್ನು ಸೂಚಿಸಲು, ಈ ಕೆಳಗೆ, ವ್ಯಾಕರಣದ ಕೆಲವು ಮುಖ್ಯ ಅಂಶಗಳನ್ನು ಪರಿಶೀಲಿಸಲಾಗಿದೆ.

**೨. ವ್ಯಾಕರಣ ಸಂಬಂಧಗಳು**

ಇಂಗ್ಲಿಷ್ ವಾಕ್ಯಗಳು ಯಾವ ರೀತಿಯಲ್ಲಿ ರಚಿತವಾಗುತ್ತವೆ ಎಂಬುದನ್ನು ತಿಳಿಸಿ ಹೇಳಲು ಮೂರು ರೀತಿಯ ಸಂಬಂಧಗಳನ್ನು ಬಳಸಿಕೊಳ್ಳುವ ಅವಶ್ಯಕತೆ ಕಂಡು ಬಂದಿದೆ. ಇವನ್ನು ಅರ್ಥ ಸಂಬಂಧಗಳು, (semantic relations) ಪ್ರಯೋಗ ಸಂಬಂಧಗಳು (pragmatic relations) ಮತ್ತು ವ್ಯಾಕರಣ ಸಂಬಂಧಗಳು (grammatical relations) ಎಂಬುದಾಗಿ ಹೆಸರಿಸಬಹುದು. ಸಂಸ್ಕೃತ ವಾಕ್ಯಗಳ ರಚನೆಯನ್ನು ವಿವರಿಸಬೇಕಿದ್ದರೂ ಕೂಡ ಈ ಮೂರು ರೀತಿಯ ಸಂಬಂಧಗಳನ್ನು ಬಳಸಿಕೊಳ್ಳುವ ಅವಶ್ಯಕತೆ ಕಂಡುಬಂದಿದೆ. ಆದರೆ, ಕನ್ನಡ ವಾಕ್ಯಗಳ ರಚನೆಯನ್ನು ವಿವರಿಸಿ ಹೇಳಲು ಇವುಗಳಲ್ಲಿ ಮೊದಲ ಎರಡು ರೀತಿಯ ಸಂಬಂಧಗಳ ಅವಶ್ಯಕತೆ ಮಾತ್ರ ಇದೆ. ಮೂರನೆಯದಾದ ವ್ಯಾಕರಣ ಸಂಬಂಧಗಳ ಅವಶ್ಯಕತೆ ಕನ್ನಡಕ್ಕಿಲ್ಲ.

ವಾಕ್ಯಗಳು ಸಾಮಾನ್ಯವಾಗಿ ಒಂದು ಘಟನೆಯನ್ನು ಇಲ್ಲವೇ ಸಂಗತಿಯನ್ನು ತಿಳಿಸುತ್ತವೆ ಎಂದು ಹೇಳಬಹುದು. ವಾಕ್ಯಗಳಲ್ಲಿ ಬರುವ ಕ್ರಿಯಾಪದಗಳು ಈ ಘಟನೆ ಯಾವುದೆಂಬುದನ್ನು ತಿಳಿಸುತ್ತವೆಯಾದರೆ, ಅವುಗಳೊಂದಿಗೆ ಬರುವ ನಾಮಪದಗಳು ಆ ಘಟನೆಯಲ್ಲಿ ತೊಡಗಿರುವ ಬೇರೆಬೇರೆ ವ್ಯಕ್ತಿ, ಪ್ರಾಣಿ, ವಸ್ತು ಮೊದಲಾದವು ಯಾವುದೆಂಬುದನ್ನು ತಿಳಿಸುತ್ತವೆ. ಉದಾಹರಣೆಗಾಗಿ, ಈ ಕೆಳಗಿನ ವಾಕ್ಯವನ್ನು ಪರಿಶೀಲಿಸಬಹುದು.

(೧ ಅ) **ರಾಜು ಹರಿಗೆ ಹೊಡೆದ.**

ಈ ವಾಕ್ಯದಲ್ಲಿ ಬರುವ **ಹೊಡೆ** ಎಂಬ ಕ್ರಿಯಾಪದವು ಆ ವಾಕ್ಯವು ತಿಳಿಸುವ ಘಟನೆಯನ್ನೂ ಮತ್ತು ಆ ಕ್ರಿಯಾಪದದೊಂದಿಗೆ ಬರುವ **ರಾಜು** ಮತ್ತು **ಹರಿ**

ಎಂಬ ನಾಮಪದಗಳು ಆ ಘಟನೆಯಲ್ಲಿ ತೊಡಗಿರುವ ಇಬ್ಬರು ವ್ಯಕ್ತಿಗಳನ್ನೂ ಸೂಚಿಸುತ್ತವೆ.

ಈ ರೀತಿ ವಾಕ್ಯವೊಂದು ತಿಳಿಸುವ ಘಟನೆಗೂ ಮತ್ತು ಆ ಘಟನೆಯಲ್ಲಿ ತೊಡಗಿರುವ ವ್ಯಕ್ತಿ ಇಲ್ಲವೇ ವಸ್ತುಗಳಿಗೂ ನಡುವಿರುವ ಅರ್ಥಸಂಬಂಧವನ್ನು ಕನ್ನಡದಲ್ಲಿ ವಿಭಕ್ತಿ ಪ್ರತ್ಯಯಗಳು ತಿಳಿಸುತ್ತವೆ. ಉದಾಹರಣೆಗಾಗಿ, ಮೇಲೆ ಕೊಟ್ಟ ವಾಕ್ಯದಲ್ಲಿ **ರಾಜು** ಎಂಬ ಪದದೊಂದಿಗಿರುವ ಪ್ರಥಮಾ ವಿಭಕ್ತಿಯು ಆತ ನಿಯೋಗಿ (ಹೊಡೆಯುವವನು) ಎಂದೂ, ಮತ್ತು ಹರಿ ಎಂಬುದರೊಂದಿಗೆ ಬರುವ ಚತುರ್ಥೀ ವಿಭಕ್ತಿಯು ಆತ ಅನುಭೋಗಿ (ಹೊಡೆಯಲ್ಪಡುವವನು) ಎಂದೂ ತಿಳಿಸುತ್ತವೆ. ಈ ನಾಮಪದಗಳ ವಿಭಕ್ತಿಯನ್ನು ಬದಲಾಯಿಸಿದಾಗ ಈ ವ್ಯಕ್ತಿಗಳ ಅರ್ಥ ಸಂಬಂಧವೂ ಬದಲಾಗುತ್ತದೆ ಎಂಬುದನ್ನು ಈ ಕೆಳಗಿನ ವಾಕ್ಯದಲ್ಲಿ ಗಮನಿಸಬಹುದು.

(೧ ಆ) **ಹರಿ ರಾಜುವಿಗೆ ಹೊಡೆದ.**

ಈ ವಾಕ್ಯದಲ್ಲಿ **ರಾಜು**ವಿನ ಬದಲು **ಹರಿ** ನಿಯೋಗಿಯಾಗಿದ್ದು **ರಾಜು** ಅನುಭೋಗಿಯಾಗಿ ಬಂದಿರುವುದನ್ನು ಕಾಣಬಹುದು.

ಒಂದೇ ಘಟನೆಯನ್ನು ಬೇರೆಬೇರೆ ಜನರು ಬೇರೆಬೇರೆ ದೃಷ್ಟಿಕೋನಗಳಿಂದ ವರ್ಣಿಸಿ ಹೇಳಲು ಸಾಧ್ಯವಿದೆ. ಉದಾಹರಣೆಗಾಗಿ, ಮೇಲೆ ಕೊಟ್ಟ ಘಟನೆಯನ್ನು ರಾಜುವಿನ ಮಿತ್ರನೊಬ್ಬ ವರದಿ ಮಾಡುವುದಿದ್ದಲ್ಲಿ ರಾಜುವನ್ನು ವಿಷಯ (topic)ವನ್ನಾಗಿ ಮಾಡಿ ಹೇಳಬಹುದು ಮತ್ತು ಹರಿಯ ಮಿತ್ರನೊಬ್ಬ ವರದಿಮಾಡುವುದಿದ್ದಲ್ಲಿ ಹರಿಯನ್ನು ವಿಷಯವನ್ನಾಗಿಮಾಡಿ ಹೇಳಬಹುದು. ರಾಜು ಮತ್ತು ಹರಿ ಎಂಬವುಗಳ ಪ್ರಯೋಗಸಂಬಂಧದಲ್ಲಿ ತೋರಬಹುದಾದ ಈ ವ್ಯತ್ಯಾಸವನ್ನು ಕೆಳಗಿನ ವಾಕ್ಯಗಳಲ್ಲಿ ಕಾಣಬಹುದು.

(೧ ಇ) **ರಾಜುವಿಗೆ ಹರಿ ಹೊಡೆದ** (ವಿಷಯ: ರಾಜು)

(೧ ಉ) **ಹರಿ ರಾಜುವಿಗೆ ಹೊಡೆದ** (ವಿಷಯ: ಹರಿ)

ಈ ಮೇಲಿನ ವಾಕ್ಯಗಳಲ್ಲಿ ರಾಜು ಮತ್ತು ಹರಿ ಎಂಬ ಪದಗಳ ವಿಭಕ್ತಿಯನ್ನು ಬದಲಾಯಿಸಿಲ್ಲ, ಅವುಗಳ ಅನುಕ್ರಮವನ್ನು ಮಾತ್ರ ಬದಲಾಯಿಸಿದೆ ಎಂಬುದನ್ನು ಗಮನಿಸಬೇಕು.

ಘಟನೆಯ ಕೇಂದ್ರಬಿಂದು (focus)ವನ್ನೂ ಕೂಡ ಇದೇ ರೀತಿ ಪದಗಳ ಅನುಕ್ರಮವನ್ನು ಬದಲಾಯಿಸುವುದರ ಮೂಲಕ ತಿಳಿಸಿ ಹೇಳಲು ಸಾಧ್ಯವಿದೆ. ಕನ್ನಡ ವಾಕ್ಯಗಳಲ್ಲಿ ಕೇಂದ್ರಬಿಂದುವನ್ನು ಸ್ಪಷ್ಟವಾಗಿ ಸೂಚಿಸಿ ಹೇಳಲು ಕೇಂದ್ರಬಿಂದುವಾಗಿರುವ ನಾಮಪದವನ್ನು ಕ್ರಿಯಾಪದದ ಅನಂತರ ಹೇಳುವ ಕ್ರಮ ರೂಢಿಯಲ್ಲಿದೆ. ಆದರೆ, ನಾಮಪದವನ್ನು ಹೀಗೆ ವಾಕ್ಯದ ಕೊನೆಗೆ ವರ್ಗಾಯಿಸುವಾಗ ಆದರ ಕ್ರಿಯಾಪದವನ್ನು ಕೃದಂತರೂಪಕ್ಕೆ ಪರಿವರ್ತಿಸುವುದು ಅವಶ್ಯ. ಉದಾ.

(೧ ಈ) **ರಾಜುವಿಗೆ ಹೊಡೆದದ್ದು ಹರಿ** (ಕೇಂದ್ರಬಿಂದು: **ಹರಿ**)

(೧ ಉ) **ಹರಿ ಹೊಡೆದದ್ದು ರಾಜುವಿಗೆ** (ಕೇಂದ್ರಬಿಂದು: **ರಾಜು**)

ಈ ವಾಕ್ಯಗಳಲ್ಲಿ **ಹೊಡೆದ** ಎಂಬ ಕ್ರಿಯಾರೂಪವನ್ನು **ಹೊಡೆದದ್ದು** ಎಂಬುದಾಗಿ ಬದಲಾಯಿಸಲಾಗಿದೆ.

ಈ ರೀತಿ ಬೇರೆಬೇರೆ ದೃಷ್ಟಿಕೋನಗಳ ಮೂಲಕ ವರದಿಯಾಗುವ ನಾಮಪದಗಳು ಬೇರೆಬೇರೆ ಪ್ರಯೋಗ ಸಂಬಂಧಗಳಲ್ಲಿ ಪ್ರಯುಕ್ತವಾಗಿವೆಯೆಂದು ಹೇಳಬಹುದು. ಕನ್ನಡದಲ್ಲಿ ಮೇಲೆ ತಿಳಿಸಿದ ಎರಡು ರೀತಿಯ ಪ್ರಯೋಗ ಸಂಬಂಧಗಳನ್ನೂ ವಾಕ್ಯದಲ್ಲಿ ಬರುವ ಪದಗಳ (ಇಲ್ಲವೇ ಪದಗುಚ್ಛಗಳ) ಅನುಕ್ರಮದ ಮೂಲಕ ತಿಳಿಸಲಾಗುತ್ತದೆ. ಪದಗಳ ವಿಭಕ್ತಿಪ್ರತ್ಯಯಗಳು ಈ ಪ್ರಯೋಗ ಸಂಬಂಧಗಳಿಗಿಂತ ತೀರ ಭಿನ್ನವಾದ ಅರ್ಥ ಸಂಬಂಧಗಳನ್ನು ತಿಳಿಸುತ್ತಿದ್ದು, ಕನ್ನಡಕ್ಕೆ ಈ ಎರಡು ರೀತಿಯ ಸಂಬಂಧಗಳನ್ನು ಬೇರೆಬೇರೆಯಾಗಿರಿಸುವ ಸಾಮರ್ಥ್ಯವಿದೆ.

ಆದರೆ, ಇಂಗ್ಲಿಷ್ ಇಲ್ಲವೇ ಸಂಸ್ಕೃತ ಭಾಷೆಗಳಲ್ಲಿ ಈ ಎರಡು ರೀತಿಯ ಸಂಬಂಧಗಳು ಬೇರೆಬೇರಾಗಿ ಸೂಚಿತವಾಗುತ್ತಿಲ್ಲ. ಉದಾಹರಣೆಗಾಗಿ ಇಂಗ್ಲಿಷಿನ ಈ ಕೆಳಗೆ ಕೊಟ್ಟ ಎರಡು ವಾಕ್ಯಗಳನ್ನು ಪರಿಶೀಲಿಸಬಹುದು.

(೨ ಅ) He beat her

ಅವನು ಆಕೆಗೆ ಹೊಡೆದ (ವಿಷಯ : he 'ಅವನು')

(೨ ಆ) She was beaten by him

ಆಕೆಗೆ ಅವನು ಹೊಡೆದ (ವಿಷಯ: she 'ಆಕೆ')

ಈ ಎರಡು ವಾಕ್ಯಗಳ ನಡುವಿನ ವ್ಯತ್ಯಾಸವೇನೆಂದರೆ, (೨ ಅ) ವಾಕ್ಯದಲ್ಲಿ he 'ಅವನು' ಎಂಬ ಪದ ವಿಷಯವಾಗಿದೆ ಮತ್ತು (೨ ಆ) ವಾಕ್ಯದಲ್ಲಿ ಇದಕ್ಕೆ ಬದಲಾಗಿ she 'ಅವಳು' ಎಂಬುದು ವಿಷಯವಾಗಿದೆ. ಎಂದರೆ, ಈ ಎರಡು ವಾಕ್ಯಗಳ ನಡುವೆ ಪ್ರಯೋಗ ಸಂಬಂಧದಲ್ಲಿ ಮಾತ್ರ ವ್ಯತ್ಯಾಸವಿದೆ, ಅರ್ಥಸಂಬಂಧದಲ್ಲಿ ವ್ಯತ್ಯಾಸವಿಲ್ಲ; ಎರಡರಲ್ಲೂ ಕೂಡ ಹೊಡೆಯುವವನು ಆತ ಮತ್ತು ಹೊಡೆಯಲ್ಪಡುವವಳು ಆಕೆ. ಆದರೆ, ಇಂಗ್ಲಿಷ್‌ನಲ್ಲಿ ಈ ಎರಡು ಪದಗಳ ಅನುಕ್ರಮವನ್ನು ಬದಲಾಯಿಸುವಾಗ ಕನ್ನಡದ ಹಾಗೆ ಅವುಗಳ ವಿಭಕ್ತಿಗಳನ್ನು ಹಾಗೆಯೇ ಉಳಿಸಿಕೊಳ್ಳಲು ಸಾಧ್ಯವಿಲ್ಲ; her ಎಂಬುದನ್ನು ವಾಕ್ಯದ ಮೊದಲ ಪದವನ್ನಾಗಿ ಮಾಡುವಾಗ she ಎಂದೂ ಮತ್ತು he ಎಂಬುದನ್ನು ವಾಕ್ಯದ ಕೊನೆಯ ಪದವನ್ನಾಗಿ ಮಾಡುವಾಗ him ಎಂದೂ ಬದಲಾಯಿಸಬೇಕಾಗುತ್ತದೆ.

ಈ ಕಾರಣದಿಂದಾಗಿ, ಇಂಗ್ಲಿಷಿನಲ್ಲಿ ಕನ್ನಡದ ಹಾಗೆ ವಿಭಕ್ತಿಪ್ರತ್ಯಯ ಮತ್ತು ಅರ್ಥ ಸಂಬಂಧಗಳೊಳಗೆ ನೇರವಾದ ಸಂಪರ್ಕವನ್ನು ಸಾಧಿಸಲು ಸಾಧ್ಯವಾಗದು. (ಇಂಗ್ಲಿಷಿನಲ್ಲಿ ವಿಭಕ್ತಿಪ್ರತ್ಯಯಗಳು ಸರ್ವನಾಮಗಳಲ್ಲಿ ಮಾತ್ರವೇ ಕಾಣಿಸಿಕೊಳ್ಳುತ್ತವೆಯೆಂಬುದು ಇನ್ನೊಂದು ತೊಂದರೆ). ಹಾಗಾಗಿ, ಅದರ ವಾಕ್ಯಗಳ ರಚನೆಯನ್ನು ವರ್ಣಿಸಿ ಹೇಳುವಾಗ "ವ್ಯಾಕರಣಸಂಬಂಧ" (grammatical relation) ಎಂಬುದಾಗಿ ಹೊಸದೊಂದು ರೀತಿಯ ಸಂಬಂಧವನ್ನು ಕಲ್ಪಿಸಿಕೊಳ್ಳುವ ಅವಶ್ಯಕತೆ ಕಂಡುಬಂದಿದೆ. ಉದಾಹರಣೆಗಾಗಿ, ಮೇಲೆ ಕೊಟ್ಟಿರುವ ಇಂಗ್ಲಿಷ್ ವಾಕ್ಯಗಳಲ್ಲಿ he ಮತ್ತು she ಎಂಬಿವುಗಳನ್ನು subject ಎಂದೂ, him ಮತ್ತು her ಎಂಬಿವುಗಳನ್ನು direct object ಎಂದೂ ಕರೆಯಲಾಗುತ್ತದೆ. ಇವು ಆ ವಾಕ್ಯಗಳಲ್ಲಿರುವ ವ್ಯಾಕರಣಸಂಬಂಧಗಳು. ಈ ಎರಡು ವಾಕ್ಯಗಳಲ್ಲಿ ವ್ಯಾಕರಣಸಂಬಂಧ (subject) ಮತ್ತು ಪ್ರಯೋಗಸಂಬಂಧ (ವಿಷಯ) ಇವೆರಡೂ ಒಂದುಗೂಡಿವೆ. ಆದರೆ, ಅವು ಬೇರೆಬೇರಾಗಿರಲೂ ಸಾಧ್ಯವಿದೆ. ಉದಾಹರಣೆಗಾಗಿ ಕೆಳಗೆ ಕೊಟ್ಟ (೩)ನೇ ವಾಕ್ಯದಲ್ಲಿ there ಎಂಬುದು ಒಂದು ವ್ಯಾಕರಣಸಂಬಂಧ (subject)ವನ್ನು ಸೂಚಿಸುವುದಾದರೂ, ಪ್ರಯೋಗಸಂಬಂಧವಾವುದನ್ನೂ ಸೂಚಿಸುವುದಿಲ್ಲ. ಅದು ಆ ವಾಕ್ಯದ ವಿಷಯವೂ ಅಲ್ಲ, ಕೇಂದ್ರಬಿಂದುವೂ ಅಲ್ಲ.

(೩) **There is a book on the table**

**ಮೇಜಿನ ಮೇಲೆ ಒಂದು ಪುಸ್ತಕ ಇದೆ.**

ಸಂಸ್ಕೃತ ವ್ಯಾಕರಣದಲ್ಲಿ ಬರುವ ಕರ್ತೃ ಮತ್ತು ಕರ್ಮ ಎಂಬ ಕಾರಕಗಳೂ ಕೂಡ ಅರ್ಥ ಮತ್ತು ಪ್ರಯೋಗ ಸಂಬಂಧಗಳಿಗಿಂತ ಭಿನ್ನವಾಗಿದ್ದು ಒಂದು

ರೀತಿಯಲ್ಲಿ ವ್ಯಾಕರಣ ಸಂಬಂಧಗಳೇ ಆಗಿವೆಯೆಂದು ಹೇಳಬಹುದು. ಆದರೆ, ಇಂಗ್ಲಿಷಿನ Subject ಮತ್ತು Direct objectಗಳಿಗೂ ಮತ್ತು ಇವಕ್ಕೂ ನಡುವೆ ಸ್ವಲ್ಪ ವ್ಯತ್ಯಾಸವಿದೆ. ಉದಾಹರಣೆಗಾಗಿ, ಕರ್ಮಣಿ ಪ್ರಯೋಗದಲ್ಲಿ ಇಂಗ್ಲಿಷಿನ Subject ಬದಲಾಗುತ್ತದೆ, ಸಂಸ್ಕೃತದ ಕರ್ತೃ ಬದಲಾಗುವುದಿಲ್ಲ. ಆದರೆ, ಕರ್ತೃಪದಗಳು (ಮತ್ತು ಇತರ ಕಾರಕಗಳು) ಸಂಸ್ಕೃತದ ವಾಕ್ಯಗಳಲ್ಲಿ ಬೇರೆಬೇರೆ ಅರ್ಥ ಮತ್ತು ಪ್ರಯೋಗ ಸಂಬಂಧಗಳನ್ನು ಸೂಚಿಸಬಲ್ಲುವಾದ್ದರಿಂದ ಅವನ್ನು ಇವೆರಡಕ್ಕಿಂತಲೂ ಭಿನ್ನವಾದ ವ್ಯಾಕರಣ ಸಂಬಂಧಗಳೆಂದು ಪರಿಗಣಿಸುವುದು ಅವಶ್ಯ (ಕಿಪಾರ್ಸ್ಕಿ ೧೯೮೨ ನೋಡಿ).

ಇಂಗ್ಲಿಷ್ ಮತ್ತು ಸಂಸ್ಕೃತ ಭಾಷೆಗಳ ವಾಕ್ಯರಚನೆಯನ್ನು ವಿವರಿಸುವಲ್ಲಿ ಬೇರೆಯೂ ಹಲವಾರು ರೀತಿಯಲ್ಲಿ ಇಂತಹ ವ್ಯಾಕರಣಸಂಬಂಧಗಳನ್ನು ಬಳಸುವುದು ಅವಶ್ಯವೆಂದು ತೋರಿಬಂದಿದೆ. ಆದರೆ ಇಂತಹ ಸಂದರ್ಭಗಳು ಕನ್ನಡದ ವಾಕ್ಯರಚನೆಯನ್ನು ವಿವರಿಸುವಲ್ಲಿ ತೋರಿಬರುವುದಿಲ್ಲವಾದ್ದರಿಂದ ಕನ್ನಡ ವ್ಯಾಕರಣದಲ್ಲಿ Subject, Direct Object ಎಂಬವುಗಳನ್ನಾಗಲಿ, ಇಲ್ಲವೇ ಕರ್ತೃ, ಕರ್ಮ ಎಂಬವುಗಳನ್ನಾಗಲಿ ಬಳಸುವ ಅವಶ್ಯಕತೆಯಿಲ್ಲ. ಅವನ್ನು ಬಳಸಿದಲ್ಲಿ ಕನ್ನಡದ ವ್ಯಾಕರಣ ಅನವಶ್ಯಕವಾಗಿ ಕ್ಲಿಷ್ಟವಾಗುತ್ತದೆ.

ಉದಾಹರಣೆಗಾಗಿ, ಕನ್ನಡದಲ್ಲಿ **ತಾನು** ಎಂಬ ಸರ್ವನಾಮದ ಬಳಕೆಯನ್ನು ಗಮನಿಸಬಹುದು. ಇದು ಸಾಮಾನ್ಯವಾಗಿ ವಾಕ್ಯದಲ್ಲಿರುವ ಇನ್ನೊಂದು ಪದಕ್ಕೆ ಪ್ರತಿನಾಮವಾಗಿ, ಎಂದರೆ ಅವೆರಡೂ ಒಂದೇ ವ್ಯಕ್ತಿ ಇಲ್ಲವೇ ವಸ್ತುವನ್ನು ಸೂಚಿಸುತ್ತವೆ ಎಂಬ ಅರ್ಥದಲ್ಲಿ ಪ್ರಯುಕ್ತವಾಗುತ್ತದೆ. (ಗೌರವಾರ್ಥದಲ್ಲಿ ಪ್ರಯುಕ್ತವಾಗುವ **ತಾವು** ಎಂಬುದು ಇದಕ್ಕೊಂದು ಅಪವಾದ). ವಾಕ್ಯವೊಂದರಲ್ಲಿ ಈ ರೀತಿ **ತಾನು** ಎಂಬ ಪದಕ್ಕೆ ಪ್ರತಿನಾಮವಾಗಿ ಬರಬಲ್ಲ ಪದ ಯಾವುದು ಎಂಬ ಪ್ರಶ್ನೆ ಇಲ್ಲಿ ಮೂಡುತ್ತದೆ. ಸಾಮಾನ್ಯವಾಗಿ ಅದಕ್ಕೆ ಈ ರೀತಿ ಪ್ರತಿನಾಮವಾಗಿ ಬರುವುದು ವಾಕ್ಯದ ಕರ್ತೃಪದ ಎಂದು ಹೇಳುವುದು ರೂಢಿ. ಆದರೆ, ಇಂಗ್ಲಿಷ್ ಮೊದಲಾದ ಬೇರೆ ಕೆಲವು ಭಾಷೆಗಳಿಗೆ ಅನ್ವಯವಾಗುವ ಈ ನಿಯಮ ಕನ್ನಡಕ್ಕೆ ಅನ್ವಯವಾಗುವುದಿಲ್ಲ. ಉದಾಹರಣೆಗಾಗಿ ಈ ಕೆಳಗಿನ ವಾಕ್ಯಗಳನ್ನು ಗಮನಿಸಿರಿ.

(೪ ಅ) **ಜಾನಕಿಗೆ ಸುಜಾತ ತನ್ನ ಸೀರೆಯನ್ನು ತೋರಿಸುತ್ತಿದ್ದಾಳೆ.**

(೪ ಆ) **ಜಾನಕಿಗೆ ಸುಜಾತ ತನ್ನ ಅಕ್ಕನ ಹಾಗೆಯೇ ಕಾಣಿಸುತ್ತಿದ್ದಾಳೆ.**

ಮೊದಲನೆಯ (೪ ಅ) ವಾಕ್ಯದಲ್ಲಿ ತನ್ನ ಎಂಬುದು ಪ್ರಥಮಾ ವಿಭಕ್ತಿಯಲ್ಲಿರುವ ಸುಜಾತ ಎಂಬ ಕರ್ತೃ ಪದಕ್ಕೆ ಪ್ರತಿನಾಮವಾಗಿ ಬಂದಿದೆ. ಆದರೆ ಎರಡನೆಯ (೪ ಆ) ವಾಕ್ಯದಲ್ಲಿ ಅದು ಸುಜಾತ ಎಂಬುದಕ್ಕೆ ಪ್ರತಿನಾಮವಾಗಿಲ್ಲ. ಇದಕ್ಕೆ ಬದಲು ಜಾನಕಿಗೆ ಎಂಬ ಚತುರ್ಥಿ ವಿಭಕ್ತಿಯಲ್ಲಿರುವ ಪದಕ್ಕೆ ಪ್ರತಿನಾಮವಾಗಿ ಬಂದಿದೆ. **ತಾನು** ಎಂಬ ಪದ ಈ ವಾಕ್ಯಗಳಲ್ಲಿ ಯಾವುದಕ್ಕೆ ಪ್ರತಿನಾಮ ಎಂಬ ಪ್ರಶ್ನೆಗೆ ಉತ್ತರ ಹೇಳುವಲ್ಲಿ ಕರ್ತೃ ಎಂಬ ಪದ ಅನುಪಯುಕ್ತ ಎಂಬುದು ಇದರಿಂದ ಸ್ಪಷ್ಟವಾಗುತ್ತದೆ.

ಈ ವಾಕ್ಯಗಳಲ್ಲಿ ನಿಯೋಗಿಯುಕ್ತ ಕ್ರಿಯಾಪದ ಯಾವುದರಲ್ಲಿದೆ ಮತ್ತು ನಿಯೋಗಿವಿರಹಿತ ಕ್ರಿಯಾಪದ ಯಾವುದರಲ್ಲಿದೆ ಎಂಬ ವ್ಯತ್ಯಾಸವೇ ಇಲ್ಲಿ ಪ್ರಮುಖವಾದುದು. ನಿಯೋಗಿಯುಕ್ತ ಕ್ರಿಯಾಪದವಿರುವ (೪ ಅ)ದಲ್ಲಿ **ತಾನು** ಎಂಬುದು ನಿಯೋಗಿಯಾಗಿರುವ **ಸುಜಾತ** ಎಂಬುದರ ಪ್ರತಿನಾಮವಾಗಿ ಬಂದಿದೆ. ಮತ್ತು ನಿಯೋಗಿವಿರಹಿತ ಕ್ರಿಯಾಪದವಿರುವ (೪ ಆ)ದಲ್ಲಿ ಅದು ಅನುಭೋಗಿಯಾಗಿರುವ, **ಜಾನಕಿ** ಎಂಬುದರ ಪ್ರತಿನಾಮವಾಗಿ ಬಂದಿದೆ.

ಕನ್ನಡದ ವ್ಯಾಕರಣದಲ್ಲಿ ಕರ್ತೃ ಇಲ್ಲವೇ subject ಎಂಬ ವ್ಯಾಕರಣಸಂಬಂಧವನ್ನು ಪ್ರಯೋಗಿಸುವಾಗ ಕಾಣಿಸಿಕೊಳ್ಳುವ ಈ ಸಮಸ್ಯೆಯನ್ನು ಬಗೆಹರಿಸಲು (೪ ಆ)ದಂತಹ ವಾಕ್ಯಗಳಲ್ಲಿ ಬರುವ ಚತುರ್ಥೀ ವಿಭಕ್ತಿಯ ಪದಗಳನ್ನು ಕರ್ತೃಗಳೆಂದು ಪರಿಗಣಿಸಲು ಸಾಧ್ಯವಿದೆ ಎಂದು ಕೆಲವರು ವಾದಿಸಿದ್ದಾರೆ (ಶ್ರೀಧರ್ ೧೯೭೯). ಆದರೆ **ತಾನು** ಎಂಬ ಪದ ದ್ವಿತೀಯಾ ವಿಭಕ್ತಿಯಲ್ಲಿರುವ ಪದಗಳಿಗೂ ಕೂಡ ಪ್ರತಿನಾಮವಾಗಿ ಬರಬಲ್ಲುದಾದ್ದರಿಂದ ಇದು **ತಾನು** ಎಂಬ ಪದದ ಸಮಸ್ಯೆಯನ್ನಂತೂ ಪರಿಹರಿಸಲಾರದು. ಉದಾ:

**(೫) ಅವರನ್ನು ತಮ್ಮ ತಮ್ಮ ಮನೆಗಳಿಗೆ ಕಳುಹಿಸಲಾಯಿತು.**

ಈ (೫)ನೇ ವಾಕ್ಯದಲ್ಲಿ **ತಮ್ಮ** ಎಂಬ ಪದ **ಅವರನ್ನು** ಎಂಬುದಕ್ಕೆ ಪ್ರತಿನಾಮವಾಗಿ ಬಂದಿದೆಯೆಂಬುದನ್ನು ಗಮನಿಸಬಹುದು. ನಿಜಕ್ಕೂ ಕನ್ನಡ ವ್ಯಾಕರಣದಲ್ಲಿ 'ಕರ್ತೃ' ಎಂಬ ಈ ವ್ಯಾಕರಣಸಂಬಂಧಕ್ಕೆ ಯಾವ ಕೆಲಸವೂ ಇಲ್ಲದಿರುವಾಗ ಅದನ್ನು ಆ ವ್ಯಾಕರಣದಲ್ಲಿ ಸೇರಿಸಿಕೊಳ್ಳುವುದರ ಮೂಲಕ ಇಲ್ಲದ ಸಮಸ್ಯೆಗಳನ್ನು ಯಾಕೆ ತಂದು ಹಾಕಬೇಕು?

**೩. ಆತ್ಮಾರ್ಥಕ ಸರ್ವನಾಮಗಳು**

ಕನ್ನಡದ ಹೆಚ್ಚಿನ ವ್ಯಾಕರಣಗಳಲ್ಲೂ ಕೂಡ **ತಾನು** ಮತ್ತು **ತಾವು** ಎಂಬ ಸರ್ವನಾಮಗಳನ್ನು ಆತ್ಮಾರ್ಥಕ ಸರ್ವನಾಮಗಳೆಂದು ಕರೆಯಲಾಗುತ್ತದೆ. ಇವು ಇಂಗ್ಲಿಷಿನಲ್ಲಿ ಬರುವ **himself, themselves, myself** ಮೊದಲಾದ reflexive ಸರ್ವನಾಮಗಳಿಗೆ ಸಮನಾದವುಗಳೆಂದೂ ಕೂಡ ಹೆಚ್ಚಿನವರ ಅಭಿಪ್ರಾಯ. ಇಂಗ್ಲಿಷ್‌ನಲ್ಲಿ ಈ ಸರ್ವನಾಮಗಳ ಉದ್ದೇಶವೇನೆಂದರೆ, ಒಂದು ವಾಕ್ಯದಲ್ಲಿ ಬರುವ ಎರಡು ಅರ್ಥಸಂಬಂಧಗಳನ್ನು ಒಂದೇ ವ್ಯಕ್ತಿ ಇಲ್ಲವೇ ವಸ್ತು ವಹಿಸಿಕೊಂಡಿದೆ ಎಂಬುದನ್ನು ತಿಳಿಸುವುದು. ಉದಾಹರಣೆಗಾಗಿ ಈ ಕೆಳಗಿನ ವಾಕ್ಯಗಳನ್ನು ಗಮನಿಸಿರಿ.

(೬ ಅ) Raju saw him in the mirror.

ರಾಜು ಅವನನ್ನು ಕನ್ನಡಿಯಲ್ಲಿ ನೋಡಿದ.

(೬ ಆ) Raju saw himself in the mirror.

ರಾಜು ತನ್ನನ್ನು ಕನ್ನಡಿಯಲ್ಲಿ ನೋಡಿಕೊಂಡ.

ಮೊದಲನೆಯ ವಾಕ್ಯ (೬ ಅ)ದ ಪ್ರಕಾರ ನೋಡಿದ ವ್ಯಕ್ತಿ ಮತ್ತು ನೋಡಲ್ಪಟ್ಟ ವ್ಯಕ್ತಿ ಬೇರೆಬೇರೆ: ಆದರೆ, ಎರಡನೆಯ ವಾಕ್ಯ (೬ ಆ)ದ ಪ್ರಕಾರ ಅವರಿಬ್ಬರು! ಬೇರೆಬೇರೆ ಅಲ್ಲ, ಒಬ್ಬನೇ. ಇಂಗ್ಲಿಷ್ ವಾಕ್ಯಗಳಲ್ಲಿ ಈ ಅರ್ಥವ್ಯತ್ಯಾಸವನ್ನು ಸೂಚಿಸಲು **him** ಎಂಬ ಸರ್ವನಾಮದ ಬದಲು **himself** ಎಂಬುದನ್ನು ಬಳಸುವ ಅವಶ್ಯಕತೆಯಿದೆ. ಕನ್ನಡ ವಾಕ್ಯದಲ್ಲೂ ಕೂಡ ಇಂಗ್ಲಿಷ್‌ನ **himself** ಎಂಬುದರ ಜಾಗದಲ್ಲಿ ತನ್ನನ್ನು ಎಂಬುದು ಬಂದಿದೆ. ಇಂಗ್ಲಿಷ್ ಮತ್ತು ಕನ್ನಡದೊಳಗೆ ಈ ರೀತಿ ಸಮಾನತೆ ಕಾಣಿಸುವುದಾದರೂ ಕೂಡ ಈ ಎರಡು ಭಾಷೆಗಳೊಳಗೆ ಇಂತಹ ವಾಕ್ಯಗಳನ್ನು ರಚಿಸುವಲ್ಲಿ ಹಲವಾರು ರೀತಿಯ ವ್ಯತ್ಯಾಸಗಳಿವೆ.

ಉದಾಹರಣೆಗಾಗಿ, ಇಂಗ್ಲಿಷ್ ವಾಕ್ಯ (೬ ಅ)ದ **saw** ಎಂಬುದು ಅದೇ ಭಾಷೆಯ (೬ ಆ) ವಾಕ್ಯದಲ್ಲಿ ಬದಲಾಗದೆ ಹಾಗೆಯೇ ಉಳಿದಿದೆ. ಆದರೆ ಕನ್ನಡ ವಾಕ್ಯಗಳಲ್ಲಿ **ನೋಡಿದ** ಎಂಬುದು **ನೋಡಿಕೊಂಡ** ಎಂದಾಗಿದೆ. ಹಾಗಾದರೆ, ಈ ಎರಡನೇ (೬ ಆ) ಕನ್ನಡ ವಾಕ್ಯದಲ್ಲಿ ಎರಡು ಅರ್ಥಸಂಬಂಧಗಳನ್ನು ಒಂದೇ ವ್ಯಕ್ತಿ ಇಲ್ಲವೇ ವಸ್ತುವಿನ ಮೇಲೆ ಹೇರಲಾಗಿದೆಯೆಂಬ ಆತ್ಮಾರ್ಥ ಇಲ್ಲವೇ reflexive ಅರ್ಥವನ್ನು ನಿಜಕ್ಕೂ ಯಾವ ವಾಕ್ಯಾಂಶ ತಿಳಿಸುತ್ತದೆ. ಸರ್ವನಾಮವೇ ಅಥವಾ ಕ್ರಿಯಾರೂಪವೇ ಎಂಬ ಪ್ರಶ್ನೆಯೇಳುತ್ತದೆ.

ಕನ್ನಡ ವಾಕ್ಯಗಳಲ್ಲಿ **ತಾನು** ಇಲ್ಲವೇ **ತಾವು** ಎಂಬ ಸರ್ವನಾಮವನ್ನು ಬಳಸದಿದ್ದರೂ ಕೂಡ ಆತ್ಮಾರ್ಥ ಬರಲು ಸಾಧ್ಯವಿದೆಯೆಂಬುದನ್ನು ಇಲ್ಲಿ ಗಮನಿಸುವುದು ಅವಶ್ಯ. ಉದಾ:

(೭) **ಗೌರಮ್ಮನವರು (ತಮಗೆ) ಅನ್ನ ಬಡಿಸಿಕೊಂಡರು.**

(೮) **ಸತೀಶನ ಕೈಯಲ್ಲಿ ಆತ (ತನಗೆ) ಭಿಕ್ಷೆ ಹಾಕಿಸಿಕೊಂಡ.**

ಈ ಮೇಲಿನ ವಾಕ್ಯಗಳಲ್ಲಿ ಬರುವ **ತಮಗೆ** ಇಲ್ಲವೇ **ತನಗೆ** ಎಂಬ ಪದವನ್ನು ತೆಗೆದು ಹಾಕಿದರೂ ಕೂಡ ಅವುಗಳಿಗಿರುವ ಆತ್ಮಾರ್ಥ ನಶಿಸದೆ ಹಾಗೆಯೇ ಉಳಿದುಕೊಳ್ಳುತ್ತದೆ. ಆದರೆ, ಅವುಗಳಲ್ಲಿ ಬರುವ **ಕೊಳ್ಳು** ಎಂಬ ಪದವನ್ನು ತೆಗೆದು ಹಾಕಿದಲ್ಲಿ ಅವುಗಳ ಆತ್ಮಾರ್ಥವೂ ಕೂಡ ನಷ್ಟವಾಗುತ್ತದೆ. ಉದಾ:

(೭ ಅ) ಗೌರಮ್ಮನವರು ಅನ್ನ ಬಡಿಸಿದರು.

(೮ ಅ) ಸತೀಶನ ಕೈಯಲ್ಲಿ ಆತ ಭಿಕ್ಷೆ ಹಾಕಿಸಿದ.

ಇಲ್ಲಿ (೭ ಅ) ವಾಕ್ಯಕ್ಕೆ 'ತಮಗೆ ಬಡಿಸಿಕೊಂಡರು' ಎಂಬ ಅರ್ಥವಾಗಲಿ, (೮ ಅ) ವಾಕ್ಯಕ್ಕೆ 'ತಾನು ಭಿಕ್ಷೆ ಹಾಕಿಸಿಕೊಂಡ' ಎಂಬ ಅರ್ಥವಾಗಲಿ ಬರಲು ಸಾಧ್ಯವಿಲ್ಲವೆಂಬುದನ್ನು ಗಮನಿಸಬಹುದು.

ಇದಲ್ಲದೆ, **ತಾನು** ಎಂಬ ಸರ್ವನಾಮವನ್ನು ಆತ್ಮಾರ್ಥವಿಲ್ಲದ ವಾಕ್ಯಗಳಲ್ಲೂ ಕೂಡ ಬಳಸಲು ಸಾಧ್ಯವಿದೆ. ಉದಾ:

(೯) **ಹರಿ ತನ್ನ ಬಟ್ಟೆಯನ್ನು ರಾಜುವಿಗೆ ಕೊಟ್ಟ.**

ಇಲ್ಲಿ **ಕೊಡು** ಎಂಬ ಘಟನೆಯಲ್ಲಿ ತೊಡಗಿರುವ ಇಬ್ಬರು ವ್ಯಕ್ತಿಗಳು (ಕೊಡುವವನು ಮತ್ತು ಸ್ವೀಕರಿಸುವವನು) ಬೇರೆಬೇರೆ (**ಹರಿ** ಮತ್ತು **ರಾಜು**) ಎಂಬುದನ್ನು ಗಮನಿಸಬೇಕು.

ಕನ್ನಡಕ್ಕೂ ಮತ್ತು ಇಂಗ್ಲಿಷಿಗೂ ನಡುವಿರುವ ಇನ್ನೊಂದು ವ್ಯತ್ಯಾಸವೆಂದರೆ, ಇಂಗ್ಲಿಷಿನ ಆತ್ಮಾರ್ಥಕ ಸರ್ವನಾಮಗಳು ಎಲ್ಲಾ ಪುರುಷಗಳಲ್ಲಿಯೂ ಬರುತ್ತವೆ (**himself, myself, yourself**, ಇತ್ಯಾದಿ), ಆದರೆ ಕನ್ನಡದ ಆತ್ಮಾರ್ಥ ಸರ್ವನಾಮಗಳು ಪ್ರಥಮಪುರುಷದಲ್ಲಿ ಮಾತ್ರ ಬರುತ್ತವೆ. ಕನ್ನಡದಲ್ಲಿ **ನಾನು ನನ್ನನ್ನೇ ನೋಡಿಕೊಂಡೆ** ಎಂದು ಹೇಳುತ್ತೇವಲ್ಲದೆ **ನಾನು ತನ್ನನ್ನೇ ನೋಡಿಕೊಂಡೆ** ಎನ್ನುವುದಿಲ್ಲ. ಈ ಸರ್ವನಾಮಗಳನ್ನು ಬಳಸುವುದು

ಮೇಲೆ ತಿಳಿಸಿದ ಆತ್ಮಾರ್ಥ (reflexive ಅರ್ಥ)ವನ್ನು ಸೂಚಿಸುವುದಕ್ಕಾಗಿ ಎಂದು ವಾದಿಸುವವರಿಗೆ ಹೀಗೆ ಪ್ರಥಮಪುರುಷರಲ್ಲಿ ಮಾತ್ರ ಅವನ್ನು ಬಳಸುತ್ತಿರಲು ಕಾರಣವೇನು ಎಂಬ ಈ ಪ್ರಶ್ನೆಯನ್ನು ಉತ್ತರಿಸುವುದು ಕಷ್ಟವಾದೀತು. ಯಾಕೆಂದರೆ ವಾಕ್ಯವೊಂದರಲ್ಲಿ ಎರಡು ಅರ್ಥಸಂಬಂಧಗಳನ್ನು ಪ್ರಥಮಪುರುಷದ ವ್ಯಕ್ತಿಯೊಬ್ಬನು ಹೇಗೆ ವಹಿಸಿಕೊಳ್ಳಬಲ್ಲನೋ ಹಾಗೆಯೇ ಮಧ್ಯಮ ಮತ್ತು ಉತ್ತಮಪುರುಷದ ವ್ಯಕ್ತಿಗಳೂ ಕೂಡ ವಹಿಸಿಕೊಳ್ಳಬಲ್ಲರು.

ಇದಕ್ಕೆ ಬದಲು, ಕನ್ನಡದ ವಾಕ್ಯಗಳಲ್ಲಿ ಆತ್ಮಾರ್ಥವನ್ನು ಸೂಚಿಸುವುದು ಸರ್ವನಾಮವಲ್ಲ, ಕ್ರಿಯಾಪದದೊಂದಿಗೆ ಬರುವ ಕೊಳ್ಳು ಎಂಬ ಪ್ರತ್ಯಯ (ಇಲ್ಲವೇ ಕ್ರಿಯಾಂಶ) ಎಂದು ವಾದಿಸಿದೆವಾದರೆ, ತಾನು ಎಂಬ ಸರ್ವನಾಮಕ್ಕೆ ಬೇರೆಯೇ ಒಂದು ಅರ್ಥವನ್ನು ಕೊಡಲು ಸಾಧ್ಯವಾದೀತು. ಕನ್ನಡದ ವಾಕ್ಯಗಳಲ್ಲಿ ಪ್ರಥಮಪುರುಷದ ಸರ್ವನಾಮಗಳನ್ನು ಬಳಸಿದಾಗಲೆಲ್ಲ ಅವಕ್ಕೆ ನಿರ್ದೇಶಕಾರ್ಥ ಮತ್ತು ಪ್ರತಿನಾಮಾರ್ಥ ಎಂಬುದಾಗಿ ಎರಡು ಬೇರೆಬೇರೆ ಅರ್ಥಗಳು ಬರಲು ಸಾಧ್ಯವಿದ್ದು, ಇದರಿಂದಾಗಿ ಅರ್ಥಸಂದಿಗ್ಧತೆಯುಂಟಾಗುತ್ತದೆ. ಉದಾಹರಣೆಗಾಗಿ ಈ ಕೆಳಗಿನ ವಾಕ್ಯವನ್ನು ಗಮನಿಸಿರಿ.

(೧೦) **ಜಾನಕಿ ಅವಳ ತಂಗಿಯನ್ನು ಪೇಟೆಗೆ ಕರೆದುಕೊಂಡು ಹೋಗಿದ್ದಾಳೆ.**

ಈ ವಾಕ್ಯದಲ್ಲಿ ಬರುವ **ಅವಳ** ಎಂಬ ಪ್ರಥಮಪುರುಷ ಸರ್ವನಾಮಕ್ಕೆ **ಜಾನಕಿಯ** ಎಂಬ ಪ್ರತಿನಾಮಾರ್ಥ ಬರಲು ಸಾಧ್ಯವಿದೆ, ಇಲ್ಲವೇ ಬೇರೊಬ್ಬ ಹೆಂಗಸಿನ (ಉದಾ: **ಸೀತೆಯ**) ಎಂಬ ನಿರ್ದೇಶಕಾರ್ಥ ಬರಲೂ ಕೂಡ ಸಾಧ್ಯವಿದೆ. ಮಾತನಾಡುವವನು ಹಿಂದಿನ ವಾಕ್ಯವೊಂದರಲ್ಲಿ ಸೀತೆಯನ್ನು ಹೆಸರಿಸಿರುವನಾದರೆ, ಇಲ್ಲವೇ ಅವನ ಹತ್ತಿರ ಸೀತೆ ನಿಂತಿರುವಳಾದರೆ, ಮೇಲಿನ ವಾಕ್ಯದಲ್ಲಿ ಬಂದ **ಅವಳ** ಎಂಬ ಸರ್ವನಾಮಕ್ಕೆ ಹೀಗೆ ಸೀತೆಯನ್ನು ನಿರ್ದೇಶಿಸುವ ಅರ್ಥ ಬರಬಹುದು.

ಪ್ರಥಮಪುರುಷ ಸರ್ವನಾಮಗಳ ಬದಲು ಇಂತಹ ವಾಕ್ಯಗಳಲ್ಲಿ **ತಾನು** ಇಲ್ಲವೇ **ತಾವು** ಎಂಬ ವಿಶಿಷ್ಟವಾದ ಸರ್ವನಾಮವನ್ನು ಬಳಸಿದಲ್ಲಿ ಈ ರೀತಿಯ ಅರ್ಥಸಂದಿಗ್ಧತೆ ಬರಲಾರದು. ಯಾಕೆಂದರೆ ವಾಕ್ಯವೊಂದರಲ್ಲಿ ಪ್ರಯುಕ್ತವಾದ **ತಾನು** ಇಲ್ಲವೇ **ತಾವು** ಎಂಬ ಸರ್ವನಾಮಕ್ಕೆ ಅದೇ ವಾಕ್ಯದಲ್ಲಿರುವ ಇನ್ನೊಂದು ನಾಮಪದವನ್ನು ಸೂಚಿಸುವಂತಹ ಪ್ರತಿನಾಮಾರ್ಥ ಮಾತ್ರವೇ ಬರಬಲ್ಲುದು. ಉದಾ:

(೧೧) ಜಾನಕಿ ತನ್ನ ತಂಗಿಯನ್ನು ಪೇಟೆಗೆ ಕರೆದುಕೊಂಡು ಹೋಗಿದ್ದಾಳೆ.

ಈ ವಾಕ್ಯದಲ್ಲಿ **ತನ್ನ** ಎಂಬ ಪದಕ್ಕೆ **ಜಾನಕಿಯ** ಎಂಬ ಅರ್ಥ ಮಾತ್ರವೇ ಬರಬಲ್ಲುದು ಎಂಬುದನ್ನು ಗಮನಿಸಬಹುದು.

ಇಂತಹ ಪ್ರತಿನಾಮಾರ್ಥ ಮತ್ತು ನಿರ್ದೇಶಕಾರ್ಥಗಳ ನಡುವಿನ ಅರ್ಥಸಂದಿಗ್ಧತೆಯು ಪ್ರಥಮಪುರುಷ ಸರ್ವನಾಮಗಳ ಬಳಕೆಯಲ್ಲಿ ಮಾತ್ರವೇ ಕಾಣಿಸುತ್ತದೆಯಲ್ಲದೆ ಉತ್ತಮ ಮತ್ತು ಮಧ್ಯಮ ಪುರುಷ ಸರ್ವನಾಮಗಳ ಬಳಕೆಯಲ್ಲಿ ಕಾಣಿಸುವುದಿಲ್ಲ. ಹಾಗಾಗಿ. **ತಾನು** ಎಂಬ ವಿಶಿಷ್ಟಸರ್ವನಾಮವನ್ನು. ಈ ಎರಡು ಪುರುಷಗಳಲ್ಲಿ (ಎಂದರೆ ಉತ್ತಮ ಮತ್ತು ಮಧ್ಯಮ ಪುರುಷಗಳಲ್ಲಿ) ಬಳಸುವ ಅವಶ್ಯಕತೆಯಿಲ್ಲ. **ತಾನು** ಎಂಬುದು ಪ್ರಥಮಪುರುಷದಲ್ಲಿ ಮಾತ್ರವೇ ಯಾಕೆ ಬರುತ್ತದೆ ಎಂಬುದನ್ನು ಈ ವಿಶ್ಲೇಷಣೆ ಸುಲಭವಾಗಿ ವಿವರಿಸಬಲ್ಲುದು (ಭಟ್ ೧೯೭೮: ೧೨೩, ೨೪೧).

ಕರಾವಳಿಯ ಕೆಲವು ಕನ್ನಡದ ಪ್ರಭೇದಗಳಲ್ಲಿ (ಉದಾ: ಹವ್ಯಕ) **ತಾನು** ಇಲ್ಲವೇ **ತಾವು** ಎಂಬ ವಿಶಿಷ್ಟವಾದ ಸರ್ವನಾಮದ ಬಳಕೆಯೇ ಇಲ್ಲವೆಂಬುದನ್ನು ಇಲ್ಲಿ ಗಮನಿಸಬಹುದು. ಈ ಪ್ರಭೇದಗಳಲ್ಲಿ ಆತ್ಮಾರ್ಥವನ್ನು ಸೂಚಿಸಲು **ಕೊಳ್ಳು** ಎಂಬುದನ್ನು ಮಾತ್ರವೇ ಬಳಸಲಾಗುತ್ತದೆ. ಪ್ರತಿನಾಮ ಮತ್ತು ನಿರ್ದೇಶಕಗಳೊಳಗಿನ ಅರ್ಥಸಂದಿಗ್ಧತೆಯನ್ನು ಬೇರೆ ವಿಧಾನಗಳ ಮೂಲಕ ನಿವಾರಿಸಲಾಗುತ್ತದೆ.

ಇಲ್ಲಿ ಗಮನಿಸಬಹುದಾದ ಇನ್ನೊಂದು ವಿಷಯವೇನೆಂದರೆ. ಜಗತ್ತಿನಲ್ಲಿರುವ ಹೆಚ್ಚಿನ ಭಾಷೆಗಳಲ್ಲಿ ಆತ್ಮಾರ್ಥವನ್ನು ಕನ್ನಡದ ಹಾಗೆ ಕ್ರಿಯಾಪದಕ್ಕೆ ಯಾವುದಾದರೊಂದು ಪ್ರತ್ಯಯ ವನ್ನು ಸೇರಿಸಿ ಸೂಚಿಸಲಾಗುತ್ತದೆ. ಇಂಗ್ಲಿಷಿನ ಹಾಗೆ ವಿಶಿಷ್ಟವಾದ ಸರ್ವನಾಮವೊಂದನ್ನು ಬಳಸಿ ಈ ಅರ್ಥವನ್ನು ಸೂಚಿಸುವ ಭಾಷೆಗಳ ಸಂಖ್ಯೆ ಕಡಿಮೆ. ಹಾಗಾಗಿ. ಕನ್ನಡ ವ್ಯಾಕರಣದ ಮೇಲೆ ಇಂಗ್ಲಿಷ್ ಭಾಷೆಯ ಈ ವ್ಯಾಕರಣಾಂಶವನ್ನು ಹೊರಿಸುವುದು ಅಸ್ವಾಭಾವಿಕ ಎಂದೂ ಹೇಳಬಹುದು.

## ೪. ನಾಮ ವಿಶೇಷಣಗಳು

ಕನ್ನಡ ಮತ್ತು ಸಂಸ್ಕೃತ ಭಾಷೆಗಳ ನಡುವೆ ಇರುವ ಇನ್ನೊಂದು ಪ್ರಮುಖವಾದ ವ್ಯತ್ಯಾಸವೆಂದರೆ. ಕನ್ನಡದಲ್ಲಿ ಕ್ರಿಯಾಪದ ಮತ್ತು ನಾಮಪದಗಳಿಗಿಂತ ಭಿನ್ನವಾದ ನಾಮವಿಶೇಷಣಗಳೆಂಬ ಪದಗಳಿವೆ. ಆದರೆ ಸಂಸ್ಕೃತದಲ್ಲಿ ನಾಮಪದಗಳಿಗೂ ಮತ್ತು ನಾಮವಿಶೇಷಣಗಳಿಗೂ ನಡುವೆ ಯಾವ

ವ್ಯತ್ಯಾಸವೂ ಇಲ್ಲ (ಜೋಶಿ ೧೯೬೭ ನೋಡಿ). ಉದಾಹರಣೆಗಾಗಿ: ಕೃಷ್ಣ ಸರ್ಪ: 'ಕಪ್ಪು ಹಾವು' ಎಂಬ ಸಂಸ್ಕೃತ ಪದಗುಚ್ಛಕ್ಕೆ ನಾಮಪದ ಯಾವುದು ಮತ್ತು ನಾಮವಿಶೇಷಣ ಯಾವುದು ಎಂಬುದನ್ನು ಸ್ಪಷ್ಟವಾಗಿ ಹೇಳಲು ಸಾಧ್ಯವಿಲ್ಲ. ಆ ಪದಗುಚ್ಛದಲ್ಲಿ ಅರ್ಥ ಹೇಳುವಾಗ ಸರ್ಪ: 'ಹಾವು' ಎಂಬುದನ್ನಾಗಲಿ, ಇಲ್ಲವೇ ಕೃಷ್ಣ: 'ಕೃಷ್ಣ' ಎಂಬುದನ್ನಾಗಲಿ ವಿಶೇಷಣವೆಂದು ಹೇಳಲು ಸಾಧ್ಯವಿದೆ. ಇದಲ್ಲದೆ, ಈ ಎರಡು ಪದಗಳ ಅನುಕ್ರಮವನ್ನು ಬದಲಾಯಿಸಿ ಸರ್ಪ: ಕೃಷ್ಣ: ಎಂದು ಹೇಳಿದರೂ ಅವುಗಳ ಅರ್ಥ ಬದಲಾಗುವುದಿಲ್ಲ. ಆ ಪದಗುಚ್ಛಕ್ಕೆ ವಿಭಕ್ತಿಪ್ರತ್ಯಯಗಳನ್ನು ಸೇರಿಸುವಾಗ ಅದರಲ್ಲಿ ಬರುವ ಎರಡು ಪದಗಳಿಗೂ ಕೂಡ ಬೇರೆಬೇರಾಗಿ ಅವನ್ನು ಸೇರಿಸುವ ಅವಶ್ಯಕತೆಯಿದೆಂಬುದು ಅವುಗಳಲ್ಲಿ ಯಾವುದು ನಾಮಪದ ಯಾವುದು ನಾಮವಿಶೇಷಣ ಎಂದು ಹೇಳಲು ಕಷ್ಟವಾಗುತ್ತಿರುವುದಕ್ಕೆ ಇನ್ನೊಂದು ಕಾರಣ (ಉದಾ: **ಕೃಷ್ಣಂ ಸರ್ಪಂ** 'ಕಪ್ಪು ಹಾವನ್ನು', **ಕೃಷ್ಣಾಯ ಸರ್ಪಾಯ** 'ಕಪ್ಪು ಹಾವಿಗೆ', **ಕೃಷ್ಣೇನ ಸರ್ಪೇಣ** 'ಕಪ್ಪು ಹಾವಿನಿಂದ' ಇತ್ಯಾದಿ).

ಆದರೆ, ಕನ್ನಡದಲ್ಲಿ ನಾಮಪದ ಮತ್ತು ನಾಮವಿಶೇಷಣಗಳು ಒಂದಕ್ಕೊಂದು ತೀರ ಭಿನ್ನವಾದ ಪದಗಳು. ಉದಾಹರಣೆಗಾಗಿ, **ಕಪ್ಪು ಹಾವು** ಎಂಬ ಪದಗುಚ್ಛದಲ್ಲಿ **ಕಪ್ಪು** ಎಂಬುದು ಮಾತ್ರವೇ ನಾಮವಿಶೇಷಣವಾಗಿ ನಿಲ್ಲಬಹುದು, **ಹಾವು** ಎಂಬುದು ನಾಮವಿಶೇಷಣವಾಗಲಾರದು. ಈ ಪದಗುಚ್ಛಕ್ಕೆ ವಿಭಕ್ತಿ ಪ್ರತ್ಯಯಗಳನ್ನು ಸೇರಿಸುವಾಗ ಅವನ್ನು **ಹಾವು** ಎಂಬ ನಾಮಪದಕ್ಕೆ ಮಾತ್ರವೇ ಸೇರಿಸಲು ಸಾಧ್ಯವಿದೆಯಲ್ಲದೆ ಸಂಸ್ಕೃತದ ಹಾಗೆ **ಕಪ್ಪು** ಎಂಬುದಕ್ಕೆ ಸೇರಿಸಲು ಸಾಧ್ಯವಿಲ್ಲ. ಇದಲ್ಲದೆ, ಕನ್ನಡದಲ್ಲಿ ಈ ಎರಡು ಪದಗಳ ಅನುಕ್ರಮವನ್ನೂ ಕೂಡ ಬದಲಾಯಿಸಲು ಸಾಧ್ಯವಿಲ್ಲ. ಹಾಗೆ ಬದಲಾಯಿಸಿ **ಹಾವು ಕಪ್ಪು** ಎಂದು ಹೇಳಿದಲ್ಲಿ ಅದು ಒಂದು ವಾಕ್ಯವಾಗಿಬಿಡುತ್ತದೆಯಲ್ಲದೆ ಸಂಸ್ಕೃತದಲ್ಲಿರುವಂತೆ ನಾಮಪದಗುಚ್ಛ (noun phrase) ಆಗಿ ಉಳಿಯುವುದಿಲ್ಲ.

ಕನ್ನಡದಲ್ಲಿ ಬರುವ ನಾಮವಿಶೇಷಣಗಳನ್ನು ಒಂದು ನಾಮಪದದೆದುರು ಅವುಗಳಲ್ಲಿ ಯಾವ ಬದಲಾವಣೆಯನ್ನೂ ಮಾಡದೆ ಬಳಸಲು ಸಾಧ್ಯವಿದೆ (ಉದಾ: **ಹೊಸ ಕುರ್ಚಿ, ಕೆಂಪು ಗೋಡೆ, ದೊಡ್ಡ ಮನೆ** ಇತ್ಯಾದಿ). ಆದರೆ, ನಾಮಪದಗಳನ್ನು ಹೀಗೆ ಇನ್ನೊಂದು ನಾಮಪದದೆದುರು ಬಳಸಬೇಕಿದ್ದಲ್ಲಿ ಅವಕ್ಕೆ ಷಷ್ಠೀ ವಿಭಕ್ತಿಯನ್ನು ಸೇರಿಸಿಕೊಳ್ಳುವ ಅವಶ್ಯಕತೆಯಿದೆ (ಉದಾ: **ಮರದ ಕುರ್ಚಿ, ಕಲ್ಲಿನ ಗೋಡೆ, ಇಟ್ಟಿಗೆಯ ಮನೆ** ಇತ್ಯಾದಿ). ಕ್ರಿಯಾಪದಗಳನ್ನೂ ಕೂಡ ಇದೇ ರೀತಿ ನಾಮಪದವೊಂದರ ಎದುರು ವಿಶೇಷಣವನ್ನಾಗಿ ಬಳಸಬೇಕಿದ್ದಲ್ಲಿ ಅವನ್ನು

ಕೃದಂತಾಂತಗಳನ್ನಾಗಿ ಪರಿವರ್ತಿಸುವ ಅವಶ್ಯಕತೆಯಿದೆ (ಉದಾ: **ಮುರಿದ ಕುರ್ಚಿ, ಅಳುವ ಹುಡುಗ** ಇತ್ಯಾದಿ).

ಕನ್ನಡದಲ್ಲಿ ನಾಮಪದಗಳನ್ನು ಕೆಲವು ವಿಶಿಷ್ಟ ಸಂದರ್ಭಗಳಲ್ಲಿ, ಯಾವ ಬದಲಾವಣೆಯೂ ಇಲ್ಲದೆ, ಹಾಗೆಯೇ ಇನ್ನೊಂದು ನಾಮಪದದೆದುರು ಬಳಸಲು ಸಾಧ್ಯವಿದೆಯೆಂಬುದೇನೋ ನಿಜ (ಉದಾ: **ಹಲ್ಲುನೋವು, ಮುಳ್ಳುಗಿಡ** ಇತ್ಯಾದಿ). ಆದರೆ ಇಂತಹ ಪದಗುಚ್ಛಗಳನ್ನು ಕನ್ನಡದಲ್ಲಿ ಸಮಸ್ತಪದಗಳೆಂದು ಪರಿಗಣಿಸುವ ಅವಶ್ಯಕತೆಯಿದೆ. ಇದೇ ರೀತಿಯಲ್ಲಿ ಕೆಲವು ನಾಮವಿಶೇಷಣಗಳನ್ನೂ ಕೂಡ ನಾಮಪದದೆದುರು ಷಷ್ಠೀವಿಭಕ್ತಿಯನ್ನು ಸೇರಿಸಿ ಬಳಸಲು ಸಾಧ್ಯವಿದೆ (ಉದಾ. **ಹಳೆಯ ಮನೆ, ಎತ್ತರದ ಗೋಡೆ** ಇತ್ಯಾದಿ). ಆದರೆ, ಅವನ್ನು ನಾಮಪದಗಳಾಗಿ ಪ್ರಯುಕ್ತವಾಗುವ ನಾಮವಿಶೇಷಣಗಳೆಂದು ಪರಿಗಣಿಸಲು ಸಾಧ್ಯವಿದೆ.

ಭಾರತದಲ್ಲಿರುವ ನಾಲ್ಕು ಮುಖ್ಯ ಭಾಷಾಪಂಗಡಗಳಲ್ಲಿ ನಾಮವಿಶೇಷಣಗಳು ನಾಲ್ಕು ಬೇರೆಬೇರೆ ರೀತಿಯಲ್ಲಿ ಪ್ರಯುಕ್ತವಾಗುತ್ತವೆ ಎಂಬುದು ಇಲ್ಲೊಂದು ಕುತೂಹಲಕಾರಿಯಾದ ವಿಷಯ. ದ್ರಾವಿಡಭಾಷೆಗಳಾದ ತಮಿಳು, ತೆಲುಗು, ಕನ್ನಡ ಮೊದಲಾದವುಗಳಲ್ಲಿ ಅವು ನಾಮಪದಗಳಿಗಿಂತ ತೀರ ಭಿನ್ನವಾಗಿವೆಯಾದರೆ, ಇಂಡೋಆರ್ಯನ್ ಭಾಷೆಗಳಾದ ಸಂಸ್ಕೃತ, ಹಿಂದಿ, ಪಂಜಾಬಿ, ಮರಾಠಿ ಮೊದಲಾದವುಗಳಲ್ಲಿ ನಾಮವಿಶೇಷಣಗಳು ಮತ್ತು ನಾಮಪದಗಳು ಹೆಚ್ಚು ಕಡಿಮೆ ಒಂದೇ ಪದಪಂಗಡಕ್ಕೆ ಸೇರುತ್ತವೆ. ಇದಕ್ಕೆ ವಿರುದ್ಧವಾಗಿ, ಟಿಬೆಟೋಬರ್ಮನ್ ಭಾಷೆಗಳಾದ ಮಣಿಪುರಿ, ಲುಶಾಯಿ, ಬೋರೋ, ಲಡಾಖಿ ಮೊದಲಾದವುಗಳಲ್ಲಿ ನಾಮವಿಶೇಷಣಗಳು ಮತ್ತು ಕ್ರಿಯಾಪದಗಳು ಒಂದೇ ಪದಪಂಗಡಕ್ಕೆ ಸೇರಿದ್ದು, ನಾಮಪದಗಳು ಮಾತ್ರ ಅವೆರಡಕ್ಕಿಂತ ತೀರ ಭಿನ್ನವಾಗಿವೆ. ಆಸ್ಟ್ರೋಏಶಿಯಾಟಿಕ್ ಭಾಷೆಗಳಾದ ಮುಂಡಾರಿ, ಸಂತಾಲಿ, ಹೋ ಮೊದಲಾದವುಗಳಲ್ಲಿ ಮಾತ್ರ, ನಾಮಪದ, ಕ್ರಿಯಾಪದ ಮತ್ತು ನಾಮವಿಶೇಷಣ ಈ ಮೂರೂ ಒಂದೇ ಪದಪಂಗಡಕ್ಕೆ ಸೇರಿದ್ದು ಅವುಗಳೊಳಗೆ ಯಾವ ವ್ಯತ್ಯಾಸವೂ ಕಾಣಿಸುತ್ತಿಲ್ಲ.

ನಾಮವಿಶೇಷಣಗಳು ಈ ರೀತಿ ನಾಮಪದ ಮತ್ತು ಕ್ರಿಯಾಪದಗಳಿಗಿಂತ ಭಿನ್ನವಾಗಿವೆಯೇ ಅಥವಾ ಅವುಗಳಲ್ಲೊಂದರೊಡನೆ (ಅಥವಾ ಎರಡರೊಡನೆಯೂ) ಸೇರಿಕೊಂಡಿವೆಯೇ ಮತ್ತು ಹಾಗೆ ಸೇರಿಕೊಂಡಿವೆಯಾದರೆ ಅವು ಯಾವುದರೊಡನೆ ಸೇರಿಕೊಂಡಿವೆ (ನಾಮಪದಗಳೊಡನೆಯೇ ಅಥವಾ ಕ್ರಿಯಾಪದಗಳೊಡನೆಯೇ) ಎಂಬ ಈ ಪ್ರಶ್ನೆಗಳು ಭಾಷೆಯೊಂದರ

ಮೂಲಸ್ವರೂಪವೇ ಎಂಬುದನ್ನೇ ಪ್ರಶ್ನಿಸುವುದಾದ್ದರಿಂದ ಈ ವಿಷಯದಲ್ಲಿ ಕಂಡುಬರುವ ವ್ಯತ್ಯಾಸಗಳನ್ನು ಭಾಷೆಗಳ ಮೂಲಸ್ವರೂಪದಲ್ಲಿರುವ ವ್ಯತ್ಯಾಸಗಳೆಂದೇ ಪರಿಗಣಿಸುವ ಅವಶ್ಯಕತೆಯಿದೆ (ಭಟ್, ಪ್ರೆಸ್ಸಿನಲ್ಲಿ, ನೋಡಿ). ಹಾಗಾಗಿ ಕನ್ನಡ ಮತ್ತು ಸಂಸ್ಕೃತ ಭಾಷೆಗಳ ನಡುವಿರುವ ಈ ವ್ಯತ್ಯಾಸದಿಂದಾಗಿ ಆ ಎರಡು ಭಾಷೆಗಳ ವ್ಯಾಕರಣಗಳು ಒಂದರಿಂದೊಂದು ತೀರ ಭಿನ್ನವಾಗಿವೆಯೆಂದು ಹೇಳಲೇಬೇಕಾಗುತ್ತದೆ.

## ೫. ಕ್ರಿಯಾಪದಗಳ ವಿಭಜನೆ

ಕನ್ನಡ ಮತ್ತು ಇತರ ಭಾಷೆಗಳ ಮೇಲೆ ಬರೆದ ಹೆಚ್ಚಿನ ವ್ಯಾಕರಣಗಳಲ್ಲಿಯೂ ಕೂಡ ಕ್ರಿಯಾಪದಗಳನ್ನು ಸಕರ್ಮಕ ಮತ್ತು ಅಕರ್ಮಕಗಳೆಂದು ಎರಡು ಗುಂಪುಗಳನ್ನಾಗಿ ವಿಭಾಗಿಸುವುದು ರೂಢಿ. ಇದು ಸಂಸ್ಕೃತ ಮತ್ತು ಸಂಸ್ಕೃತಜನ್ಯಗಳಾದ ಹಿಂದಿ, ಮರಾಠಿ, ಗುಜರಾತಿ ಮೊದಲಾದ ಭಾಷೆಗಳ ಹಾಗೂ ಇಂಗ್ಲಿಷ್, ಫ್ರೆಂಚ್ ಮೊದಲಾದ ಯುರೋಪಿಯನ್ ಭಾಷೆಗಳ ವ್ಯಾಕರಣಗಳನ್ನು ರಚಿಸುವಲ್ಲಿ ಅತ್ಯುಪಯುಕ್ತವಾಗುವಂತಹ ಒಂದು ವಿಭಜನೆ. ಆದರೆ, ಕನ್ನಡ ಭಾಷೆಯ ವ್ಯಾಕರಣವನ್ನು ರಚಿಸುವಲ್ಲಿ ಈ ವಿಭಜನೆಯಿಂದ ಹೆಚ್ಚಿನ ಪ್ರಯೋಜನವೇನೂ ಸಿಗಲಾರದು.

ಒಂದು ಘಟನೆಯಲ್ಲಿ ಮುಖ್ಯವಾಗಿ ಒಂದೇ ವ್ಯಕ್ತಿ ಇಲ್ಲವೇ ವಸ್ತು ತೊಡಗಿರುವುದಾದರೆ, ಅಂತಹ ಘಟನೆಯನ್ನು ತಿಳಿಸುವ ಕ್ರಿಯಾಪದವನ್ನು ಅಕರ್ಮಕವೆಂದೂ, ಮತ್ತು; ಒಂದಕ್ಕಿಂತ ಜಾಸ್ತಿ ವ್ಯಕ್ತಿ ಇಲ್ಲವೇ ವಸ್ತುಗಳು ಬೇರೆಬೇರೆ ಅರ್ಥಸಂಬಂಧಗಳಲ್ಲಿ ತೊಡಗಿರುವುದಾದರೆ ಅಂತಹ ಘಟನೆಯನ್ನು ತಿಳಿಸುವ ಕ್ರಿಯಾಪದವನ್ನು ಸಕರ್ಮಕವೆಂದೂ ಕರೆಯುತ್ತಾರೆ. ಉದಾಹರಣೆಗಾಗಿ, **ಓಡು** ಎಂಬ ಕ್ರಿಯಾಪದದೊಂದಿಗೆ ಒಂದೇ ಒಂದು ಮುಖ್ಯವಾದ ವ್ಯಕ್ತಿ ಇಲ್ಲವೇ ಪ್ರಾಣಿಯನ್ನು ಸೂಚಿಸುವ ನಾಮಪದ ಸೇರಿರುತ್ತದೆ. (**ರಾಜು ಓಡಿದ**); ಹಾಗಾಗಿ ಅದು ಅಕರ್ಮಕ. **ಮನೆಗೆ, ನಿನ್ನೆ, ಬೇಗನೆ,** ಮೊದಲಾದ ಪದಗಳು ಈ ವಾಕ್ಯದಲ್ಲಿ ಬರಬಲ್ಲುವೆಂಬುದೇನೋ ನಿಜ; ಆದರೆ ಅವನ್ನು ಅಮುಖ್ಯ ಘಟಕಗಳೆಂದು ತಿಳಿಯಲಾಗುತ್ತದೆ. **ದೂಡು** ಎಂಬ ಕ್ರಿಯಾಪದದೊಂದಿಗೆ ಎರಡು ಬೇರೆಬೇರೆ ವ್ಯಕ್ತಿಗಳನ್ನು ಸೂಚಿಸುವ ನಾಮಪದಗಳು ಬೇರೆಬೇರೆ ಅರ್ಥಸಂಬಂಧಗಳಲ್ಲಿ ಸೇರಿರುತ್ತವೆ. (**ರಾಜು ಹರಿಯನ್ನು ದೂಡಿದ**); ಹಾಗಾಗಿ ಅದು ಸಕರ್ಮಕ. ಮೊದಲನೆಯ ವಾಕ್ಯದಲ್ಲಿ ಕರ್ತೃ (**ರಾಜು**) ಮಾತ್ರ ಇದೆ, ಕರ್ಮ ಇಲ್ಲ ಮತ್ತು ಎರಡನೆಯ ವಾಕ್ಯದಲ್ಲಿ ಕರ್ತೃ (**ರಾಜು**) ಮತ್ತು ಕರ್ಮ (**ಹರಿ**) ಇವೆರಡೂ ಇವೆ

ಎಂಬ ಕಲ್ಪನೆಯ ಮೇಲೆ ಈ ಎರಡು ವಿಧವಾದ ಕ್ರಿಯಾಪದದ ಹೆಸರುಗಳನ್ನು ಸಿದ್ಧಪಡಿಸಲಾಗಿದೆ.

ಸಂಸ್ಕೃತಜನ್ಯ ಭಾಷೆಗಳಾದ ಹಿಂದಿ. ಮರಾಠಿ. ಗುಜರಾತಿ ಮೊದಲಾದವುಗಳಲ್ಲಿ ಈ ವಿಭಜನೆಗೆ ಬಹಳ ಮಹತ್ವವಿದೆ. ಉದಾಹರಣೆಗಾಗಿ. ಹಿಂದೀ ಭಾಷೆಯಲ್ಲಿ ಸಕರ್ಮಕ ಕ್ರಿಯಾಪದಗಳು ಅಭೂತಕಾಲದಲ್ಲಿ ಪ್ರಯುಕ್ತವಾದಾಗ ಅವುಗಳ ಲಿಂಗವಚನಗಳು ವಾಕ್ಯದ ಕರ್ತೃಪದದ ಲಿಂಗವಚನಗಳಿಗೆ ಅನುಗುಣವಾಗಿರುತ್ತವೆ ಮತ್ತು ಭೂತಕಾಲದಲ್ಲಿ ಕರ್ಮ ಪದದ ಲಿಂಗ ವಚನಗಳಿಗೆ ಅನುಗುಣವಾಗಿರುತ್ತವೆ. ಉದಾ:

(೧೧ ಅ) ರಾಮ್ ರೋಟೀ ಖಾತಾ ಹೈ

ರಾಮ ರೊಟ್ಟಿ ತಿನ್ನುತ್ತಾನೆ.

(೧೧ ಆ) ರಾಮ್ ನೇ ರೋಟೀ ಖಾಯೀ

ರಾಮ ರೊಟ್ಟಿ ತಿಂದ.

ಮೊದಲನೆಯ ವಾಕ್ಯದಲ್ಲಿರುವ ಕ್ರಿಯಾಪದವು ಕರ್ತೃಪದವಾದ **ರಾಮ್** ಎಂಬುದರ ಲಿಂಗವಚನದಲ್ಲಿದೆ. ಆದರೆ ಎರಡನೆಯದು ಕರ್ಮವಚನವಾದ **ರೋಟೀ** ಎಂಬುದರ ಲಿಂಗವಚನವನ್ನು ಪಡೆದಿದೆಯೆಂಬುದನ್ನು ಗಮನಿಸಬಹುದು.

ಅಕರ್ಮಕ ಕ್ರಿಯಾಪದಗಳು ಮಾತ್ರ ಇದಕ್ಕಿಂತ ತೀರ ಭಿನ್ನವಾಗಿದ್ದು. ಅವುಗಳ ಲಿಂಗವಚನಗಳು ಭೂತ ಮತ್ತು ಅಭೂತ ಕಾಲಗಳೆರಡರಲ್ಲೂ ಕರ್ತೃಪದದ ಲಿಂಗವಚನಗಳಿಗೆ ಅನುಗುಣವಾಗಿಯೇ ಇರುತ್ತವೆ. ಉದಾ:

(೧೨ ಅ) ರಾಮ್ ಬಾಜಾರ್ ಜಾತಾ ಹೈ

ರಾಮ ಸಂತೆಗೆ ಹೋಗುತ್ತಾನೆ

(೧೨ ಆ) ರಾಮ್ ಬಾಜಾರ್ ಗಯಾ

ರಾಮ ಸಂತೆಗೆ ಹೋದ.

ಇದಲ್ಲದೆ ಬೇರೆಯೂ ಹಲವಾರು ವಿಷಯಗಳಲ್ಲಿ ಈ ಸಕರ್ಮಕ-ಅಕರ್ಮಕ ಕ್ರಿಯಾ ವಿಭಜನೆಯು ಸಂಸ್ಕೃತ. ಹಿಂದೀ ಮೊದಲಾದ ಭಾಷೆಗಳ ವ್ಯಾಕರಣದಲ್ಲಿ ಬಹಳ ಮುಖ್ಯವಾದ ಪಾತ್ರವನ್ನು ವಹಿಸುತ್ತದೆ.

ಆದರೆ, ಕನ್ನಡ ಭಾಷೆಯು ವ್ಯಾಕರಣದಲ್ಲಿ, ಈ ರೀತಿಯ ವಿಭಜನೆಯ ಬದಲು ನಿಯೋಗಿಯುಕ್ತ ಮತ್ತು ನಿಯೋಗಿವಿರಹಿತ ಎಂಬ ಕ್ರಿಯಾಪದಗಳ ವಿಭಜನೆಗೇನೇ ಹೆಚ್ಚಿನ ಪ್ರಾಮುಖ್ಯವಿದೆ. ಉದಾಹರಣೆಗಾಗಿ, ಕನ್ನಡದಲ್ಲಿ ಎರಡು ವಾಕ್ಯಗಳನ್ನು, ಅವುಗಳಲ್ಲಿ ಮೊದಲನೆಯ ವಾಕ್ಯದ ಕ್ರಿಯಾಪದವನ್ನು ಅದರ ನ್ಯೂನರೂಪಕ್ಕೆ ಪರಿವರ್ತಿಸಿ ಜೋಡಿಸಲು ಸಾಧ್ಯವಿದೆ. ಹೀಗೆ ಜೋಡಿಸುವಾಗ ಆವೆರಡೂ ನಿಯೋಗಿಯುಕ್ತ ಕ್ರಿಯಾಪದಗಳನ್ನೊಳಗೊಂಡಿವೆಯಾದರೆ ಅವುಗಳ ನಿಯೋಗಿ ಒಂದೇ ಆಗಿದ್ದಾಗ ಮಾತ್ರ ಅವನ್ನು ಹೀಗೆ ಜೋಡಿಸಲು ಸಾಧ್ಯವಿದೆ. ನಿಯೋಗಿಗಳು ಬೇರೆ ಬೇರಾಗಿವೆಯಾದಲ್ಲಿ ಅವನ್ನು ಹೀಗೆ ನ್ಯೂನರೂಪದ ಮೂಲಕ ಜೋಡಿಸಲು ಸಾಧ್ಯವಿಲ್ಲವೆಂಬುದನ್ನು ಈ ಕೆಳಗಿನ ವಾಕ್ಯಗಳಿಂದ ತಿಳಿಯಬಹುದು.

(೧೩ಅ) ರಾಜು ಕವಿತೆ ಓದಿ ಅರ್ಥ ಹೇಳಿದ

(೧೩ಆ) *ರಾಜು ಕವಿತೆ ಓದಿ ಹರಿ ಅರ್ಥ ಹೇಳಿದ

ಮೊದಲನೆಯ (೧೩ ಅ) ವಾಕ್ಯದಲ್ಲಿ ಬರುವ ಎರಡು ಉಪವಾಕ್ಯಗಳಲ್ಲೂ ನಿಯೋಗಿ ಒಂದೇ (ರಾಜು) ಆಗಿರುವುದರಿಂದ ಆ ವಾಕ್ಯ ಸಮರ್ಪಕವಾಗಿದೆ. ಆದರೆ ಎರಡನೆಯ (೧೩ ಆ) ವಾಕ್ಯದಲ್ಲಿ ನಿಯೋಗಿಗಳು (ರಾಜು ಮತ್ತು ಹರಿ) ಬೇರೆಬೇರಾಗಿರುವುದರಿಂದ ಆ ವಾಕ್ಯ ಸಮರ್ಪಕವಾಗಿಲ್ಲವೆಂಬುದನ್ನು ಗಮನಿಸಬಹುದು.

ಆದರೆ, ಹೀಗೆ ಜೋಡಿಸಲ್ಪಡುವ ವಾಕ್ಯಗಳೆರಡೂ ನಿಯೋಗಿಯುಕ್ತವಾಗಿದ್ದಲ್ಲಿ, ಅಂತಹ ವಾಕ್ಯಗಳೊಳಗೆ ಸಮಾನಪದಗಳಿಲ್ಲದಿದ್ದರೂ ಕೂಡ ಅವನ್ನು ಜೋಡಿಸುವುದು ಅಸಮರ್ಪಕವಾಗುವುದಿಲ್ಲ. ಉದಾ:

(೧೪ ಅ) **ಮರಬಿದ್ದು ಮಾಡು ಮುರಿಯಿತು.**

(೧೪ ಆ) **ಅವನು ಚೊಟ್ಟೆಹಾಕಿ ಮಗುವಿಗೆ ಎಚ್ಚರವಾಯಿತು.**

ಮೊದಲನೆಯ (೧೪ ಅ) ವಾಕ್ಯದಲ್ಲಿ ಎರಡು ನಿಯೋಗಿವಿರಹಿತ ಉಪವಾಕ್ಯಗಳನ್ನು ಜೋಡಿಸಲಾಗಿದೆ ಮತ್ತು ಎರಡನೆಯ (೧೪ ಆ) ವಾಕ್ಯದಲ್ಲಿ ನಿಯೋಗಿಯುಕ್ತ ವಾಕ್ಯವೊಂದನ್ನು ಇನ್ನೊಂದು ನಿಯೋಗಿ ವಿರಹಿತ ವಾಕ್ಯದೊಂದಿಗೆ ಜೋಡಿಸಲಾಗಿದೆ. ಈ ಎರಡು ವಾಕ್ಯಗಳಲ್ಲೂ ಕೂಡ ಭಿನ್ನಭಿನ್ನವಾದ ವ್ಯಕ್ತಿ ಇಲ್ಲವೇ ವಸ್ತುಗಳು ಪ್ರಯುಕ್ತವಾಗಿವೆಯಾದರೂ ಈ ವಾಕ್ಯಗಳು ಅಸಮರ್ಪಕವಾಗಿಲ್ಲ ಎಂಬುದನ್ನು ಗಮನಿಸಬಹುದು.

ಕನ್ನಡದ ಈ ವ್ಯಾಕರಣ ನಿಯಮವನ್ನು ರಚಿಸುವಲ್ಲಿ ಸಕರ್ಮಕ-ಅಕರ್ಮಕ ವಿಭಜನೆಯಿಂದ ಯಾವ ಪ್ರಯೋಜನವೂ ಸಿಗಲಾರದೆಂಬುದನ್ನು ಈ ಕೆಳಗಿನ ಅಸಮರ್ಪಕ ವಾಕ್ಯದಿಂದ ತಿಳಿಯಬಹುದು.

(೧೫) ***ಮಗು ಅತ್ತು ತಾಯಿ ಓಡಿದಳು.**

ಈ ವಾಕ್ಯದಲ್ಲಿ ಬರುವ ಉಪವಾಕ್ಯಗಳೆರಡೂ ಅಕರ್ಮಕಗಳು; ಹೀಗಿದ್ದರೂ ಅವು ನಿಯೋಗಿ ಯುಕ್ತಗಳಾಗಿವೆಯಾದ್ದರಿಂದ ಮತ್ತು ಅವುಗಳಲ್ಲಿ ಬರುವ ನಿಯೋಗಿಗಳು ಬೇರೆಬೇರಾಗಿವೆಯಾದ್ದರಿಂದ ಈ ವಾಕ್ಯ ಅಸಮರ್ಪಕವಾಗಿದೆ.

ಅಕರ್ಮಕ ಕ್ರಿಯಾಪದಗಳಿರುವ ವಾಕ್ಯಗಳಲ್ಲಿ ಸಾಮಾನ್ಯವಾಗಿ ಒಂದು ಮುಖ್ಯವಾದ ನಾಮಪದಗುಚ್ಛ ಮಾತ್ರ ಬರುವುದಾದ ಕಾರಣ ಅಂತಹ ವಾಕ್ಯಗಳನ್ನು ಕರ್ತೃ ಮತ್ತು ವಿಧೇಯ ಎಂಬುದಾಗಿ ವಿಭಾಗಿಸುವುದು ಕಷ್ಟವೇನಲ್ಲ. ಆದರೆ, ಒಂದಕ್ಕಿಂತ ಜಾಸ್ತಿ ನಾಮಪದಗುಚ್ಛ ಗಳಿರುವ ಸಕರ್ಮಕ ವಾಕ್ಯಗಳನ್ನು ಈ ರೀತಿ ವಿಂಗಡಿಸಲು ಪ್ರಯತ್ನಿಸುವಾಗ ಕನ್ನಡದಲ್ಲಿ ಹಲ ಕೆಲವು ಸಮಸ್ಯೆಗಳೇಳುತ್ತವೆ.

ಮೊದಲನೆಯದಾಗಿ, ಇಂತಹ ಒಂದಕ್ಕಿಂತ ಜಾಸ್ತಿ ನಾಮಪದಗುಚ್ಛಗಳಿರುವ ವಾಕ್ಯಗಳು ಕನ್ನಡದಲ್ಲಿ ನಿಯೋಗಿಯುಕ್ತ ಮತ್ತು ನಿಯೋಗಿರಹಿತ ಎಂಬುದಾಗಿ ಎರಡು ಮುಖ್ಯ ಗುಂಪುಗಳಲ್ಲಿ ಸೇರುತ್ತವೆ. ನಿಯೋಗಿಯುಕ್ತ ವಾಕ್ಯಗಳಲ್ಲಿ ನಿಯೋಗಿಯೇ ಕರ್ತೃವೆಂದು ಪರಿಗಣಿ ಸುವುದು ಸುಲಭ. ಆದರೆ, ನಿಯೋಗಿರಹಿತ ವಾಕ್ಯಗಳಲ್ಲಿ ಯಾವ ನಾಮಪದಗುಚ್ಛವನ್ನು ಕರ್ತೃವೆಂದು ಪರಿಗಣಿಸಬೇಕು ಎಂಬ ಪ್ರಶ್ನೆಗೆ ಉತ್ತರ ಕೊಡುವುದು ಕಷ್ಟ. ಉದಾಹರಣೆಗಾಗಿ, ಈ ಕೆಳಗಿನ ವಾಕ್ಯವನ್ನು ಗಮನಿಸಿರಿ.

(೧೬) **ರಾಜುವಿಗೆ ಒಂದು ಪುಸ್ತಕ ಸಿಕ್ಕಿತು.**

ಈ ವಾಕ್ಯದಲ್ಲಿ **ಸಿಕ್ಕಿತು** ಎಂಬ ಕ್ರಿಯಾಪದದ ಲಿಂಗವಚನಗಳು **ಪುಸ್ತಕ** ಎಂಬುದರ ಲಿಂಗವಚನಕ್ಕೆ ಸಮನಾಗಿರುವುದರಿಂದ ಮತ್ತು **ಪುಸ್ತಕ** ಎಂಬ ಪದ ಪ್ರಥಮಾವಿಭಕ್ತಿಯಲ್ಲಿ ಬಂದಿದೆಯಾದ್ದರಿಂದ ಅದನ್ನೇ ಕರ್ತೃವೆಂದು ಪರಿಗಣಿಸಬೇಕೆಂಬುದು ಹಿಂದಿನಿಂದಲೂ ಬಂದ ರೂಢಿ. ಆದರೆ, ಮೇಲೆ ಮೂರನೇ ವಿಭಾಗದಲ್ಲಿ ಹೇಳಿದಂತೆ, ಕನ್ನಡದಲ್ಲಿ ಕಾಣಿಸುವ ಕೆಲವು ಸಮಸ್ಯೆಗಳನ್ನು ನಿವಾರಿಸಲು ಇಂತಹ ವಾಕ್ಯಗಳಲ್ಲಿ **ರಾಜುವಿಗೆ** ಎಂಬ ಚತುರ್ಥೀ ವಿಭಕ್ತಿಯಲ್ಲಿರುವ ನಾಮಪದವನ್ನು ಕರ್ತೃವೆಂದು ಪರಿಗಣಿಸುವುದು ಅವಶ್ಯವೆಂದು ವಾದಿಸುವವರು

ಕೆಲವರಿದ್ದಾರೆ. **ತಾನು** ಎಂಬ ಸರ್ವನಾಮವು ಇಂತಹ ವಾಕ್ಯಗಳಲ್ಲಿ ಚತುರ್ಥೀ ವಿಭಕ್ತಿಯಲ್ಲಿರುವ ನಾಮಪದಕ್ಕೆ ಪ್ರತಿನಾಮವಾಗಿ ಬರುತ್ತದೆಯೆಂಬುದು ಹೀಗೆ ಹೇಳಲು ಒಂದು ಕಾರಣ. ಆದರೆ, ನಾನು (ಭಟ್ ೧೯೯೧:೧೭೦-೧೭೯) ತೋರಿಸಿಕೊಟ್ಟಂತೆ ಚತುರ್ಥೀ ವಿಭಕ್ತಿಯಲ್ಲಿರುವ ಇಂತಹ ನಾಮಪದಗಳನ್ನು ಕರ್ತೃವೆಂದು ಹೇಳಲು ಕೊಡಬಹುದಾದ ಆಧಾರಗಳಾವುವೂ ಕನ್ನಡದ ಮಟ್ಟಿಗೆ ಸಮರ್ಪಕವಾಗಿಲ್ಲ. ನಿಜಕ್ಕೂ ಕನ್ನಡವಾಕ್ಯಗಳ ರಚನೆಯಲ್ಲಿ ಕರ್ತೃ ಎಂಬ ವ್ಯಾಕರಣ ಸಂಬಂಧಕ್ಕೇನೇ ಅವಕಾಶವಿಲ್ಲ ಎಂಬುದು ನನ್ನ ವಾದ.

ಇಂಗ್ಲಿಷಿನ ವ್ಯಾಕರಣಕಾರರು ಅದರ ಕ್ರಿಯಾಪದಗಳನ್ನು **ಸಾಂತ್ಯ** (telic) ಮತ್ತು ನಿರಂತರ ಇಲ್ಲವೇ ಅಂತ್ಯರಹಿತ (atelic) ಎಂಬುದಾಗಿ ಎರಡು ಮುಖ್ಯ ಗುಂಪುಗಳಲ್ಲಿ ವಿಭಜಿಸುವುದು ಅದರಲ್ಲಿ ಬರುವ ಹಲವಾರು ವ್ಯಾಕರಣ ನಿಯಮಗಳನ್ನು ವಿವರಿಸಲು ಅತ್ಯಂತ ಉಪಯುಕ್ತವಾದುದೆಂದು ತೋರಿಸಿಕೊಟ್ಟಿದ್ದಾರೆ. ಇಂತಹ ವಿಭಜನೆ ಎಲ್ಲಾ ಭಾಷೆಗಳಿಗೂ ಅನ್ವಯಿಸುತ್ತದೆಂದು ಕೆಲವರ ವಾದ (ಡೊವ್ಟಿ ೧೯೭೯). ಆದರೆ, ಕನ್ನಡ ವ್ಯಾಕರಣದ ಅಧ್ಯಯನಕ್ಕೆ ಈ ರೀತಿಯ ವಿಭಜನೆಯಿಂದ ಹೆಚ್ಚಿನ ಪ್ರಯೋಜನವೇನೂ ಸಿಗುವ ಹಾಗೆ ಕಾಣಿಸುವುದಿಲ್ಲ. ಇದಕ್ಕೆ ಬದಲಾಗಿ ಮೇಲೆ ತಿಳಿಸಿದ ನಿಯೋಗಿಯುಕ್ತ ಮತ್ತು ನಿಯೋಗಿರಹಿತ ಎಂಬ ವಿಭಜನೆಯೇ ಕನ್ನಡಕ್ಕೆ ಅತ್ಯಂತ ಉಪಯುಕ್ತವಾದುದು.

ಉದಾಹರಣೆಗಾಗಿ, ಇಂಗ್ಲಿಷಿನಲ್ಲಿ ಸಾಂತ್ಯ ಕ್ರಿಯಾಪದಗಳನ್ನೊಳಗೊಂಡಿರುವ ಎರಡು ವಾಕ್ಯಗಳನ್ನು ಸೇರಿಸಿದಾಗ ಅವುಗಳಲ್ಲಿ ಎರಡನೆಯ ವಾಕ್ಯ ತಿಳಿಸುವ ಘಟನೆ ಮೊದಲನೆಯ ವಾಕ್ಯ ತಿಳಿಸುವ ಘಟನೆಯ ಅನಂತರ ನಡೆಯುವುದೆಂಬ ಅರ್ಥ ಬರುತ್ತದೆ; ಮತ್ತು ನಿರಂತರ ಕ್ರಿಯಾಪದಗಳಿರುವ ಎರಡು ವಾಕ್ಯಗಳನ್ನು ಸೇರಿಸಿದಾಗ ಅವು ತಿಳಿಸುವ ಎರಡೂ ಘಟನೆಗಳು ಒಟ್ಟೊಟ್ಟಾಗಿ ನಡೆಯುತ್ತವೆಯೆಂಬ ಅರ್ಥ ಬರುತ್ತದೆ. ಇದಕ್ಕೆ ಬದಲು ಸಾಂತ್ಯ ಕ್ರಿಯಾಪದವಿರುವ ಒಂದು ವಾಕ್ಯವನ್ನು ನಿರಂತರ ಕ್ರಿಯಾಪದವಿರುವ ಇನ್ನೊಂದು ವಾಕ್ಯದೊಂದಿಗೆ ಸೇರಿಸಿದಾಗ, ಅವಕ್ಕೆ ಈ ಎರಡು ರೀತಿಯ ಅರ್ಥಗಳೂ (ಎಂದರೆ, ಅವು ತಿಳಿಸುವ ಎರಡು ಘಟನೆಗಳಲ್ಲಿ ಒಂದಾದನಂತರ ಇನ್ನೊಂದು ನಡೆಯುತ್ತದೆ ಎಂಬುದಾಗಿ, ಇಲ್ಲವೇ ಎರಡೂ ಒಟ್ಟೊಟ್ಟಾಗಿ ನಡೆಯುತ್ತವೆ ಎಂಬುದಾಗಿ) ಬರಲು ಸಾಧ್ಯವಿದ್ದು, ಅರ್ಥಸಂದಿಗ್ಧತೆಯುಂಟಾಗುತ್ತದೆ. ಉದಾ:

(೧೭) Raju came in; the clock ticked

(ಅ) ರಾಜು ಒಳಗೆ ಬಂದ; ಗಡಿಯಾರ ಸದ್ದು ಮಾಡಿತು

(ಆ) ರಾಜು ಒಳಗೆ ಬಂದ; ಗಡಿಯಾರ ಸದ್ದುಮಾಡುತ್ತಿತ್ತು.

ಮೇಲೆ ಕೊಟ್ಟಿರುವ ಇಂಗ್ಲಿಷ್ ವಾಕ್ಯಕ್ಕೆ ಅದರ ಕೆಳಗೆ ಕನ್ನಡ ವಾಕ್ಯಗಳ ಮೂಲಕ ತೋರಿಸಿರುವಂತೆ (ಅ) ಮತ್ತು (ಆ) ಎಂಬ ಎರಡು ಬೇರೆಬೇರೆ ಅರ್ಥಗಳು ಬರಲು ಸಾಧ್ಯವಿದ್ದು ಆ ವಾಕ್ಯ ಅರ್ಥಸಂದಿಗ್ಧವಾಗಿದೆ. ಆದರೆ, ಅದಕ್ಕೆ ಸಮನಾಗಿರುವ ಕನ್ನಡ ವಾಕ್ಯಗಳಲ್ಲಿ ಇಂತಹ ಅರ್ಥಸಂದಿಗ್ಧತೆಯಿಲ್ಲ. ಕನ್ನಡದಲ್ಲಿ ಕ್ರಿಯಾಪದವನ್ನು (೧೭ ಆ) ವಾಕ್ಯದಲ್ಲಿ ತೋರಿಸಿದಂತೆ ನಿರಂತರ ರೂಪದಲ್ಲಿ ಬಳಸಿದಾಗ ಮಾತ್ರ ಘಟನೆಗಳೆರಡು ಒಟ್ಟೊಟ್ಟಾಗಿ ನಡೆದುವೆಂಬ ಅರ್ಥ ಬರಬಲ್ಲುದು.

## ೬. ಕಾಲವಾಚಕ ಪ್ರತ್ಯಯಗಳು

ಕ್ರಿಯಾಪದವೊಂದರಲ್ಲಿ ಅದು ತಿಳಿಸುವ ಘಟನೆಯ ಕಾಲಕ್ಕೆ ಸಂಬಂಧಿಸಿದಂತೆ ಮೂರು ಬೇರೆಬೇರೆ ರೀತಿಯ ಕಾಲವಾಚಕ ಪ್ರತ್ಯಯಗಳು ಬರಲು ಸಾಧ್ಯವಿದೆ. ಭೂತ, ವರ್ತಮಾನ ಮತ್ತು ಭವಿಷ್ಯತ್ ಎಂಬ ಕಾಲಸಂಬಂಧೀ (tense) ಪ್ರತ್ಯಯಗಳು ಇವುಗಳಲ್ಲಿ ಒಂದು ರೀತಿಯವು ಮಾತ್ರ. ಇವು ಕ್ರಿಯಾಪದವು ತಿಳಿಸುವ ಘಟನೆಯ ಸಮಯಕ್ಕೂ ಮತ್ತು ಅದನ್ನು ವರದಿ ಮಾಡುವವನ ಸಮಯಕ್ಕೂ ನಡುವೆ ಯಾವ ರೀತಿಯ ಸಂಬಂಧವಿದೆ ಎಂಬುದನ್ನು ತಿಳಿಸುತ್ತವೆ. ಘಟನೆಯು ಅದನ್ನು ವರದಿ ಮಾಡುವ ಸಮಯಕ್ಕಿಂತ ಮೊದಲೇ ನಡೆದಿದೆಯೆಂಬುದನ್ನು ಭೂತಪ್ರತ್ಯಯವೂ, ಅದರ ಅನಂತರ ನಡೆಯಲಿದೆಯೆಂಬುದನ್ನು ಭವಿಷ್ಯತ್‌ಪ್ರತ್ಯಯವೂ ಮತ್ತು ಅವೆರಡೂ ಒಂದೇ ಸಮಯದಲ್ಲಿ ನಡೆಯುತ್ತಿವೆಯೆಂಬುದನ್ನು ವರ್ತಮಾನಪ್ರತ್ಯಯವೂ ತಿಳಿಸುತ್ತದೆ.

ಕನ್ನಡದಲ್ಲಿ ಮುಖ್ಯವಾಗಿ ಭೂತ (ಉದಾ: **ಒಡೆದ**) ಮತ್ತು ಅಭೂತ (ಉದಾ: **ಒಡೆಯುತ್ತಾನೆ**) ಎಂಬ ಎರಡು ವಿಧವಾದ ಕಾಲಸಂಬಂಧೀ ಪ್ರತ್ಯಯಗಳು ಪ್ರಯುಕ್ತವಾಗುತ್ತವೆ. ಇವುಗಳಲ್ಲಿ ಎರಡನೆಯದು ವರ್ತಮಾನ ಮತ್ತು ಭವಿಷ್ಯತ್ ಕಾಲಗಳೆರಡನ್ನೂ ಸೇರಿಸಿ ಹೇಳುತ್ತದೆ. ಘಟನೆಯ ಸಮಯವನ್ನು ಈ ರೀತಿ ವರದಿ ಮಾಡುವ ಸಮಯಕ್ಕೆ ಸಂಬಂಧಿಸಿದಂತೆ ಹೇಳುವ ಬದಲು ಇನ್ನೊಂದು ಘಟನೆಯ ಸಮಯಕ್ಕೆ ಸಂಬಂಧಿಸಿದಂತೆಯೂ ಹೇಳಲು ಸಾಧ್ಯವಿದೆ.

ಕನ್ನಡದಲ್ಲಿ ಇದಕ್ಕಾಗಿ ಕ್ರಿಯಾಪದಗಳ ನ್ಯೂನರೂಪಗಳನ್ನು ಬಳಸಲಾಗುತ್ತದೆ. ಇಂತಹ ರೂಪಗಳಲ್ಲಿ ಕನ್ನಡವು ಮೂರು ಬೇರೆಬೇರೆ ಕಾಲಸಂಬಂಧೀ ಪ್ರತ್ಯಯಗಳನ್ನು ಉಪಯೋಗಿಸುತ್ತದೆ. ಉದಾಹರಣೆಗಾಗಿ, **ಒಡೆದು ತರುತ್ತೇನೆ, ಒಡೆಯುತ್ತಾ ತರುತ್ತೇನೆ** ಮತ್ತು **ಒಡೆಯಲು ತರುತ್ತೇನೆ** ಎಂಬ ಕ್ರಿಯಾರೂಪಗಳಲ್ಲಿ **ಒಡೆ** ಎಂಬ ಕ್ರಿಯಾಪದಕ್ಕೆ ಹೀಗೆ **ತರು** ಎಂಬ ಘಟನೆಗೆ ಮೊದಲೇ, ಅದರೊಂದಿಗೆ ಮತ್ತು ಅದರ ಅನಂತರ ನಡೆಯುವ ಘಟನೆ ಎಂಬ ಅರ್ಥಗಳನ್ನು ಕೊಡುವ ಮೂರು ಬೇರೆಬೇರೆ ರೂಪಗಳಿವೆಯೆಂಬುದನ್ನು ಗಮನಿಸಬಹುದು.

ಘಟನೆಯೊಂದರ ಆಂತರಿಕ ಕಾಲರಚನೆಯೆಂತಹದು ಎಂಬುದನ್ನು ತಿಳಿಸುವ "ಕಾಲರಚನೆ"ಯ (aspect) ಪ್ರತ್ಯಯಗಳು ಇನ್ನೊಂದು ರೀತಿಯವು. ಘಟನೆಯೊಂದನ್ನು ಒಂದು ಸಂಪೂರ್ಣ ಘಟಕವನ್ನಾಗಿ ವರದಿ ಮಾಡಬಹುದು. ಇಲ್ಲವೇ ಆದಿ, ಮಧ್ಯ ಮತ್ತು ಅಂತ್ಯಗಳಿರುವ ಒಂದು ವಿಸ್ತೃತ ಘಟಕವನ್ನಾಗಿ ಕೂಡ ವರದಿ ಮಾಡಬಹುದು. ಇಂಗ್ಲಿಷ್‌ನಲ್ಲಿ ಈ ಎರಡು ರೀತಿಯ ಕಾಲರಚನಾ ಭೇದವನ್ನು perfect ಮತ್ತು imperfect ಎಂಬ ಹೆಸರಿನಿಂದ ಕರೆಯುತ್ತಾರೆ. ಸಂಸ್ಕೃತ ವ್ಯಾಕರಣದಲ್ಲೂ ಕೂಡ ಲಟ್ ಮತ್ತು ಲಿಟ್ ಎನ್ನುವ ಕ್ರಿಯಾರೂಪಗಳು ಈ ಎರಡು ಕಾಲರಚನೆಗಳನ್ನು ಪ್ರತಿನಿಧೀಕರಿಸುತ್ತವೆ. ಇದಲ್ಲದೆ, ಬೇರೆಯೂ ಹಲವಾರು ರೀತಿಯ ಕಾಲರಚನಾ ವೈವಿಧ್ಯಗಳನ್ನು ವ್ಯಾಕರಣದಲ್ಲಿ ಕಾಣಬಹುದು. ಉದಾಹರಣೆಗಾಗಿ, ಕ್ರಿಯೆಯು ಒಮ್ಮೆ ಮಾತ್ರ ನಡೆಯುವುದೇ (simulfactive) ಅಥವಾ ಹಲವು ಬಾರಿ ನಡೆಯುವುದೇ (iterative) ಎಂಬುದನ್ನು ತಿಳಿಸುವ ಪ್ರತ್ಯಯಗಳು ಈ ವಿಭಾಗಕ್ಕೆ ಸೇರುತ್ತವೆ.

ಈ ಎರಡು ರೀತಿಯ ಕಾಲವಾಚಕ ಪ್ರತ್ಯಯಗಳು ಮಾತ್ರವಲ್ಲದೆ, ಘಟನೆಯ ಯಥಾರ್ಥತೆಯನ್ನು ಸೂಚಿಸುವ (mood) ಪ್ರತ್ಯಯಗಳೂ ಕೂಡ ಕ್ರಿಯಾಪದದೊಂದಿಗೆ ಬರಲು ಸಾಧ್ಯವಿದೆ. ಯಥಾರ್ಥ (realis) ಮತ್ತು ಅಯಥಾರ್ಥ (irrealis) ಎಂಬ ಭೇದ ಮಾತ್ರವಲ್ಲದೆ, ಘಟನೆಯೊಂದನ್ನು ವರದಿಮಾಡಲು ಯಾವ ರೀತಿಯ ಆಧಾರ ಇಲ್ಲವೇ ಪ್ರಮಾಣವಿದೆ (ಪ್ರತ್ಯಕ್ಷವೇ, ಅನುಮಾನವೇ, ಇನ್ನೊಬ್ಬರು ಹೇಳಿದುದರಿಂದಾಗಿ ತಿಳಿದುದೇ ಇತ್ಯಾದಿ) ಎಂಬುದನ್ನು ತಿಳಿಸುವಂತಹ ಪ್ರತ್ಯಯಗಳೂ ಕೂಡ ಈ ವಿಭಾಗಕ್ಕೆ ಸೇರುವ ಕಾಲವಾಚಕ ಪ್ರತ್ಯಯಗಳು.

ಈ ಮೂರು ರೀತಿಯ ಕಾಲವಾಚಕ ಪ್ರತ್ಯಯಗಳಲ್ಲಿ ಬೇರೆಬೇರೆ ಭಾಷೆಗಳು ಬೇರೆಬೇರೆ ರೀತಿಯವಕ್ಕೆ ಪ್ರಾಮುಖ್ಯವನ್ನು ಕೊಡುತ್ತವೆಯೆಂಬುದು ಒಂದು ಗಮನಾರ್ಹವಾದ ಸಂಗತಿ. ಈ ವಿಷಯದಲ್ಲಿ ಕನ್ನಡ, ತಮಿಳು, ತೆಲುಗು ಮೊದಲಾದ ದ್ರಾವಿಡ ಭಾಷೆಗಳು ಸಂಸ್ಕೃತ, ಹಿಂದಿ, ಮರಾಠಿ ಮೊದಲಾದ ಇಂಡೋಆರ್ಯನ್ ಭಾಷೆಗಳಿಗಿಂತ ತೀರ ಭಿನ್ನವಾದವುಗಳು. ಕನ್ನಡ ವ್ಯಾಕರಣದಲ್ಲಿ ಕಾಲಸಂಬಂಧೀ ಪ್ರತ್ಯಯಗಳಿಗೆ ಜಾಸ್ತಿ ಪ್ರಾಮುಖ್ಯ ದೊರೆಯುವುದಾದರೆ, ಸಂಸ್ಕೃತ, ಹಿಂದಿ ಮೊದಲಾದವುಗಳ ವ್ಯಾಕರಣದಲ್ಲಿ ಕಾಲರಚನೆಯ ಪ್ರತ್ಯಯಗಳಿಗೆ ಜಾಸ್ತಿ ಪ್ರಾಮುಖ್ಯ ದೊರೆಯುತ್ತದೆ. ಭಾರತದ ಉತ್ತರಭಾಗದಲ್ಲಿ ಪ್ರಚಲಿತವಾಗಿರುವ ಲಡಾಖಿ, ನಾಗ, ಮಣಿಪುರಿ ಮೊದಲಾದ ಟಿಬೆಟೋಬರ್ಮನ್ ಭಾಷೆಗಳಲ್ಲಿ ಇವೆರಡರ ಬದಲಾಗಿ ಯಥಾರ್ಥತೆಗೆ ಜಾಸ್ತಿ ಪ್ರಾಮುಖ್ಯ ದೊರೆಯುತ್ತದೆ.

ಸಂಸ್ಕೃತದ ಕ್ರಿಯಾರೂಪಗಳಲ್ಲಿ ಲಟ್ (**ಕರೋತಿ** 'ಮಾಡುತ್ತಾನೆ') ಮತ್ತು ಲಿಟ್ (**ಚಕಾರ** 'ಮಾಡಿದ') ಎಂಬ ಈ ಎರಡು ರೂಪಗಳೊಳಗಿರುವ ವ್ಯತ್ಯಾಸವೇ ಅತ್ಯಂತ ಪ್ರಮುಖವಾದುದೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಮೊದಲನೆಯದು ಘಟನೆಯನ್ನು ಒಂದು ಸಂಪೂರ್ಣ ಘಟಕವನ್ನಾಗಿ ವರದಿ ಮಾಡುವುದಾದರೆ, ಎರಡನೆಯದು ಅದರ ವಿಸ್ತೃತ ರೂಪವನ್ನು ವರದಿ ಮಾಡುತ್ತದೆ. ಮೊದಲನೆಯದು ಘಟನೆಯಿಂದ ಪ್ರಾಪ್ತವಾದ ಪರಿಸ್ಥಿತಿಯನ್ನು ತಿಳಿಸುವುದಾದರೆ, ಎರಡನೆಯದು ಘಟನೆಯ ಕ್ರಿಯೆಯನ್ನು ಸೂಚಿಸುತ್ತದೆ. ಸಂಸ್ಕೃತದಲ್ಲಿ ಈ ಎರಡು ಕ್ರಿಯಾರೂಪಗಳಲ್ಲದೆ ಲುಙ್ (**ಅಕರತ್** 'ಮಾಡಿದ') ಮತ್ತು ಲೃಟ್(**ಕರಿಷ್ಯತಿ** 'ಮಾಡಲಿದ್ದಾನೆ') ಎಂಬ ಇನ್ನೆರಡು ಮುಖ್ಯ ಕ್ರಿಯಾರೂಪಗಳಿವೆಯಾದರೂ ಮೂಲತಃ ಇವು ಲಟ್ ರೂಪದಿಂದಲೇ ಸಿದ್ಧವಾದವುಗಳು (ಬರೋ ೧೯೫೫: ೨೯೪). ಸಂಸ್ಕೃತದಲ್ಲಿ ಕಾಲಸಂಬಂಧವನ್ನು ಸೂಚಿಸುವ ಪ್ರತ್ಯಯಗಳಿಗೆ ಜಾಸ್ತಿ ಪ್ರಾಮುಖ್ಯ ಇಲ್ಲ. ಮೇಲೆ ಕೊಟ್ಟಿರುವ ಎಲ್ಲಾ ಕ್ರಿಯಾರೂಪಗಳಿಗೂ ಕೂಡ **ಅ** ಎಂಬ ಪೂರ್ವಪ್ರತ್ಯಯವನ್ನು ಸೇರಿಸಿ ಅವಕ್ಕೆ ಭೂತಾರ್ಥವನ್ನು ಕೊಡಲು ಸಾಧ್ಯವಿದೆ (ಉದಾ: **ಅಕರೋತ್** 'ಮಾಡಿದ' **ಅಕರಿಷ್ಯತ್** 'ಮಾಡಿದರೆ' ಇತ್ಯಾದಿ). ಆದರೆ, ವೇದಕಾಲದ ಸಂಸ್ಕೃತದಲ್ಲಿ ಈ ವಿಧಾನ ಜಾಸ್ತಿ ಕ್ರಮಬದ್ಧವಾಗಿದ್ದು ಅನಂತರದ ಸಂಸ್ಕೃತದಲ್ಲಿ ಅನಿಯಮಿತವಾಗಿದೆ. ಮತ್ತು ಈ ರೀತಿ ಪೂರ್ವಪ್ರತ್ಯಯವನ್ನು ಸೇರಿಸದಿದ್ದರೂ ಕೂಡ ಕ್ರಿಯಾಪದಗಳಿಗೆ ಭೂತಾರ್ಥ ಬರಲು ಸಾಧ್ಯವಿದೆ. ಕೆಲವು

ಕ್ರಿಯಾರೂಪಗಳಿಗೆ ಇಂತಹ ಪೂರ್ವಪ್ರತ್ಯಯವನ್ನು ಕಡ್ಡಾಯವಾಗಿ ಸೇರಿಸಬೇಕಾಗುತ್ತದೆ.

ಕನ್ನಡದಲ್ಲಿ ಕಾಲಸಂಬಂಧವನ್ನು ತಿಳಿಸುವುದಕ್ಕಾಗಿ ಪ್ರತ್ಯಯಗಳನ್ನು ಕ್ರಿಯಾಪದಕ್ಕೆ ನೇರವಾಗಿ ಸೇರಿಸಲಾಗುತ್ತದೆ ಆದರೆ, ಕಾಲರಚನೆಯನ್ನು ತಿಳಿಸಲು ಈ ರೀತಿ ಪ್ರತ್ಯಯಗಳನ್ನು ಉಪಯೋಗಿಸುವ ಬದಲು ಮುಖ್ಯಕ್ರಿಯಾಪದದ ನ್ಯೂನರೂಪದೊಂದಿಗೆ ಕೆಲವು ವಿಶಿಷ್ಟವಾದ ಕ್ರಿಯಾರೂಪಗಳನ್ನು ಬಳಸಲಾಗುತ್ತದೆ. ಉದಾರಹಣೆಗಾಗಿ, ಸಂಪೂರ್ಣಾರ್ಥವನ್ನು ತಿಳಿಸಲು ಕನ್ನಡದಲ್ಲಿ **ಬಿಡು** ಎಂಬ ಕ್ರಿಯಾರೂಪವನ್ನು ಈ ರೀತಿ ಬಳಸುವ ಕ್ರಮವಿದೆ. ಉದಾ. **ಕುಳಿತುಬಿಟ್ಟ, ಬಿದ್ದುಬಿಟ್ಟ, ಓಡಿಬಿಟ್ಟ** ಇತ್ಯಾದಿ. ಘಟನೆಯ ಯಥಾರ್ಥತೆಯನ್ನೂ ಕೂಡ ಇದೇ ರೀತಿ ಕ್ರಿಯಾಪದದೊಂದಿಗೆ ಬರುವ ವಿಶಿಷ್ಟ ಕ್ರಿಯಾರೂಪಗಳ ಮೂಲಕ ತಿಳಿಸಲಾಗುತ್ತದೆ. ಉದಾ: **ಬೀಳಬಹುದು, ಓದಬಲ್ಲೆ** ಇತ್ಯಾದಿ.

ಹಿಂದಿ, ಮರಾಠಿ, ಪಂಜಾಬಿ ಮೊದಲಾದ ಇಂಡೋಆರ್ಯನ್ ಭಾಷೆಗಳು ಈ ವಿಷಯದಲ್ಲಿ ಕನ್ನಡಕ್ಕಿಂತ ತೀರ ಭಿನ್ನವಾದವುಗಳು. ಸಂಸ್ಕೃತದ ಹಾಗೆ ಅವು ಕ್ರಿಯಾರಚನೆಯನ್ನು ತಿಳಿಸುವ ಪ್ರತ್ಯಯಗಳಿಗೆ ಜಾಸ್ತಿ ಪ್ರಾಮುಖ್ಯವನ್ನು ಕೊಡುತ್ತವೆ. ಈ ಪ್ರತ್ಯಯಗಳು ಇವುಗಳ ಮುಖ್ಯಕ್ರಿಯಾಪದಕ್ಕೆ ನೇರವಾಗಿ ಸೇರಿಕೊಳ್ಳುತ್ತವೆ. ಕಾಲಸಂಬಂಧವನ್ನು ಸೂಚಿಸುವ ಕೆಲಸವನ್ನು ಈ ಭಾಷೆಗಳಲ್ಲಿ ಉಪಕ್ರಿಯಾಪದಗಳು (auxiliary verbಗಳು) ಮಾಡುತ್ತವಲ್ಲದೆ ಮುಖ್ಯ ಕ್ರಿಯಾಪದಗಳು ಮಾಡುವುದಿಲ್ಲ. ಉದಾಹರಣೆಗಾಗಿ ಹಿಂದೀ ಭಾಷೆಯ **ಗಿರ್‍ತಾ ಹೈ** 'ಬೀಳುತ್ತದೆ' ಮತ್ತು **ಗಿರಾ ಹೈ** 'ಬಿದ್ದಿದೆ' ಎಂಬ ಕ್ರಿಯಾರೂಪಗಳನ್ನು ಗಮನಿಸಬಹುದು. ಇವುಗಳಲ್ಲಿ ಗಿರ್ ಎಂಬ ಕ್ರಿಯೆಯೊಂದಿಗಿರುವ **ತಾ** ಮತ್ತು **ಆ** ಎಂಬ ಪ್ರತ್ಯಯಗಳು ಕಾಲರಚನೆಯನ್ನೂ ಮತ್ತು **ಹೈ** ಎಂಬ ಉಪಕ್ರಿಯಾಪದ ಕಾಲಸಂಬಂಧವನ್ನೂ ತಿಳಿಸುತ್ತವೆ. ಇವೆರಡು ತಿಳಿಸುವ ಕಾಲ ಸಂಬಂಧವನ್ನು ಬದಲಿಸಲು ಈ ಉಪಕ್ರಿಯಾಪದವನ್ನು ಬದಲಿಸುವುದು ಅವಶ್ಯ. ಉದಾ: **ಗಿರ್‍ತಾ ಥಾ** 'ಬೀಳುತ್ತಿತ್ತು', **ಗಿರಾ ಥಾ** 'ಬಿದ್ದಿತ್ತು'

**೭. ಮುಕ್ತಾಯ**

ಕನ್ನಡ ಭಾಷೆಯ ವ್ಯಾಕರಣದ ಕುರಿತಾಗಿ ನಾವು ಕಲಿಯಬೇಕಾದ ವಿಷಯಗಳು ಬೆಟ್ಟದಷ್ಟಿವೆ. ಒಂದೊಂದು ವಿಷಯವನ್ನು ಕೂಡ ಆಳವಾಗಿ ಅಭ್ಯಸಿಸುತ್ತ ಹೋದಂತೆ ಹೊಸ ಹೊಸ ವಿಷಯ ಗಳು ನಮ್ಮ ಗಮನಕ್ಕೆ ಬರುತ್ತಲಿರುತ್ತವೆ. ಇದು ಕನ್ನಡದ ಸಂಶೋಧನೆಯಲ್ಲಿ ಮಾತ್ರವಲ್ಲ, ಎಲ್ಲಾ

ಎಂಬ ನಾಮಪದಗಳು ಆ ಘಟನೆಯಲ್ಲಿ ತೊಡಗಿರುವ ಇಬ್ಬರು ವ್ಯಕ್ತಿಗಳನ್ನೂ ಸೂಚಿಸುತ್ತವೆ.

ಈ ರೀತಿ ವಾಕ್ಯವೊಂದು ತಿಳಿಸುವ ಘಟನೆಗೂ ಮತ್ತು ಆ ಘಟನೆಯಲ್ಲಿ ತೊಡಗಿರುವ ವ್ಯಕ್ತಿ ಇಲ್ಲವೇ ವಸ್ತುಗಳಿಗೂ ನಡುವಿರುವ ಅರ್ಥಸಂಬಂಧವನ್ನು ಕನ್ನಡದಲ್ಲಿ ವಿಭಕ್ತಿ ಪ್ರತ್ಯಯಗಳು ತಿಳಿಸುತ್ತವೆ. ಉದಾಹರಣೆಗಾಗಿ, ಮೇಲೆ ಕೊಟ್ಟ ವಾಕ್ಯದಲ್ಲಿ **ರಾಜು** ಎಂಬ ಪದದೊಂದಿಗಿರುವ ಪ್ರಥಮಾ ವಿಭಕ್ತಿಯು ಆತ ನಿಯೋಗಿ (ಹೊಡೆಯುವವನು) ಎಂದೂ, ಮತ್ತು ಹರಿ ಎಂಬುದರೊಂದಿಗೆ ಬರುವ ಚತುರ್ಥೀ ವಿಭಕ್ತಿಯು ಆತ ಅನುಭೋಗಿ (ಹೊಡೆಯಲ್ಪಡುವವನು) ಎಂದೂ ತಿಳಿಸುತ್ತವೆ. ಈ ನಾಮಪದಗಳ ವಿಭಕ್ತಿಯನ್ನು ಬದಲಾಯಿಸಿದಾಗ ಈ ವ್ಯಕ್ತಿಗಳ ಅರ್ಥ ಸಂಬಂಧವೂ ಬದಲಾಗುತ್ತದೆ ಎಂಬುದನ್ನು ಈ ಕೆಳಗಿನ ವಾಕ್ಯದಲ್ಲಿ ಗಮನಿಸಬಹುದು.

(೧ ಅ) **ಹರಿ ರಾಜುವಿಗೆ ಹೊಡೆದ.**

ಈ ವಾಕ್ಯದಲ್ಲಿ **ರಾಜು**ವಿನ ಬದಲು **ಹರಿ** ನಿಯೋಗಿಯಾಗಿದ್ದು **ರಾಜು** ಅನುಭೋಗಿಯಾಗಿ ಬಂದಿರುವುದನ್ನು ಕಾಣಬಹುದು.

ಒಂದೇ ಘಟನೆಯನ್ನು ಬೇರೆಬೇರೆ ಜನರು ಬೇರೆಬೇರೆ ದೃಷ್ಟಿಕೋನಗಳಿಂದ ವರ್ಣಿಸಿ ಹೇಳಲು ಸಾಧ್ಯವಿದೆ. ಉದಾಹರಣೆಗಾಗಿ, ಮೇಲೆ ಕೊಟ್ಟ ಘಟನೆಯನ್ನು ರಾಜುವಿನ ಮಿತ್ರನೊಬ್ಬ ವರದಿ ಮಾಡುವುದಿದ್ದಲ್ಲಿ ರಾಜುವನ್ನು ವಿಷಯ (topic)ವನ್ನಾಗಿ ಮಾಡಿ ಹೇಳಬಹುದು ಮತ್ತು ಹರಿಯ ಮಿತ್ರನೊಬ್ಬ ವರದಿಮಾಡುವುದಿದ್ದಲ್ಲಿ ಹರಿಯನ್ನು ವಿಷಯವನ್ನಾಗಿಮಾಡಿ ಹೇಳಬಹುದು. ರಾಜು ಮತ್ತು ಹರಿ ಎಂಬವುಗಳ ಪ್ರಯೋಗಸಂಬಂಧದಲ್ಲಿ ತೋರಬಹುದಾದ ಈ ವ್ಯತ್ಯಾಸವನ್ನು ಕೆಳಗಿನ ವಾಕ್ಯಗಳಲ್ಲಿ ಕಾಣಬಹುದು.

(೧ ಇ) **ರಾಜುವಿಗೆ ಹರಿ ಹೊಡೆದ** (ವಿಷಯ: ರಾಜು)

(೧ ಉ) **ಹರಿ ರಾಜುವಿಗೆ ಹೊಡೆದ** (ವಿಷಯ: ಹರಿ)

ಈ ಮೇಲಿನ ವಾಕ್ಯಗಳಲ್ಲಿ ರಾಜು ಮತ್ತು ಹರಿ ಎಂಬ ಪದಗಳ ವಿಭಕ್ತಿಯನ್ನು ಬದಲಾಯಿಸಿಲ್ಲ, ಅವುಗಳ ಅನುಕ್ರಮವನ್ನು ಮಾತ್ರ ಬದಲಾಯಿಸಿದೆ ಎಂಬುದನ್ನು ಗಮನಿಸಬೇಕು.

# ಆಕರ ಸೂಚಿ

ಭಟ್. ಡಿ. ಎನ್. ಎಸ್. ೧೯೭೮. ಕನ್ನಡ ವಾಕ್ಯಗಳು: ಆಂತರಿಕ ರಚನೆ ಮತ್ತು ಅರ್ಥವ್ಯವಸ್ಥೆ. ಮೈಸೂರು: ಗೀತಾ ಬುಕ್ ಹೌಸ್.

"- 1991. Grammatical Relations: Evidence against their necessity and universality. London: Routledge.

-" ಪ್ರೆಸ್ನಲ್ಲಿ The Adjectival Category: Differentiating and Identifying charecteristics. Amsterdam: John Benjamins Publishing company

ರೋ, ಟಿ. ೧೯೫೫. The Sanskrit Language. London: Faber and Faber.

ಡೋವ್ಟೀ, ಡಿ. ಆರ್. ೧೯೭೬. Word meaning and Mountague Grammar. Dordrecht, Holland: D Heidel Publishing company.

ಜೋಷಿ. ಎಸ್. ಡಿ. ೧೯೬೭ Adjectives and substantives as a single class in the parts of speech. Journal of the University of Poona, Humanities Section, 25 (19-30).

ಪಾರ್ಸ್ಕಿ. ಪಿ. ೧೯೮೨. Some Theoretical Problems in Panini's Grammar. Poona: Bhandrkar Oriental Research Institute.

ಳ್ಳಿ. ಜಿ. ಎಸ್. ೧೯೭೬. Kesiraja's Sabdamanidarpana. Dharwar: Karnatak University.

ಧರ್. ಎಸ್. ಎನ್. ೧೯೭೯. Dative subjects and the notion of subject, Lingua, 49 (99-125).

# ಕನ್ನಡ ವಿಶ್ವವಿದ್ಯಾಲಯ, ಹಂಪಿ

## ವಿದ್ಯಾರಣ್ಯ - ೫೮೩ ೨೨೧

## ನಮ್ಮ ಪ್ರಕಟಣೆಗಳು

### ಮಂಟಪ ಮಾಲೆ

| | | |
|---|---|---|
| ೧. | ಜಾನಪದ ಕ್ಷೇತ್ರಕಾರ್ಯ | ಪುರುಷೋತ್ತಮ ಬಿಳಿಮಲೆ |
| ೨. | ಪುರಾಣ | ಓ. ಎಲ್. ನಾಗಭೂಷಣ ಸ್ವಾಮಿ |
| ೩. | ಸಂಶೋಧನೆಯ ಎರಡು ಹೆಜ್ಜೆಗಳು | ಎಚ್. ಎಂ. ಮರುಳಸಿದ್ಧಯ್ಯ |
| ೪. | ಭಾಷಾಂತರ | ಓ. ಎಲ್. ನಾಗಭೂಷಣ ಸ್ವಾಮಿ |
| ೫. | ಕೀಟಗಳು ಬದುಕುವ ದಾರಿ | ಪಿ. ಶಿವರಾಮ ರೈ |
| ೬. | ಸ್ಫೋಟವಾದ | ಮಲ್ಲೇಪುರಂ ಜಿ. ವೆಂಕಟೇಶ |
| ೭. | ಅಭಿವೃದ್ಧಿ ಮೀಮಾಂಸೆ | ಟಿ. ಆರ್. ಚಂದ್ರಶೇಖರ್ |
| ೮. | ಜಮೀನ್ದಾರಿ ವ್ಯವಸ್ಥೆ ಮತ್ತು ತೆಲುಗು ಸಾಹಿತ್ಯ | ಕುಂ. ವೀರಭದ್ರಪ್ಪ |
| ೯. | ಸತ್ತ ಮೇಲೆ ಸಮಾಜ ಸೇವೆ | ಎಸ್. ಜೆ. ನಾಗಲೋಟಿಮಠ |
| ೧೦. | ನೆಲದ ಮರೆಯ ನಿದಾನ | ಚಂದ್ರಶೇಖರ ಕಂಬಾರ |
| ೧೧. | ಕಾಯಕ ದಾಸೋಹ | ಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮಿಗಳು |
| ೧೨. | ಗ್ರಾಮೀಣ ನ್ಯಾಯ | ಎಚ್. ವಿ. ನಾಗೇಶ್ |
| ೧೩. | ಫರ್ಡಿನಾಂಡ್ ಕಿಟೆಲ್ ಜೀವನ ಸಾಧನೆ- ಕೋಶ ರಚನೆ | ವಿಲ್ಯಂ ಮಾಡ್ತ |
| ೧೪. | ದೇಹ ಕ್ರಿಯೆಯ ಸೋಜಿಗಗಳು | ವಸಂತ ಕುಲಕರ್ಣಿ |
| ೧೫. | ಕನ್ನಡ ವ್ಯಾಕರಣ ಪರಂಪರೆ | ಡಿ. ಎನ್. ಶಂಕರಭಟ್ |

ವಿವರಗಳಿಗೆ ಬರೆಯಿರಿ

ನಿರ್ದೇಶಕರು
ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ,
ಕಾಮಲಾಪುರ - ೫೮೩ ೨೨೧

೨೩ ೨೭

# ಮಂಟಪ ಮಾಲೆ

## ೧೫

ಹಂಪಿಯ ಕನ್ನಡ ವಿಶ್ವವಿದ್ಯಾಲಯ ವಿದ್ಯೆಯನ್ನು ಕಲಿಯಲು ಅನುವು ಮಾಡಿಕೊಡುವ ಒಂದು ಸಂಸ್ಥೆಯೇ ಹೊರತು ಅದು ವಿದ್ಯೆಯನ್ನು ಕಲಿಸುವ ಸಂಸ್ಥೆಯಲ್ಲ. ನಮ್ಮ ನಾಡಿನಲ್ಲಿ ಹಳೆಯ ಕಾಲದ ತಿಳುವಳಿಕೆಯೊಂದಿದೆ. ಅಲ್ಲದೆ ಪಶ್ಚಿಮದಿಂದ ಹರಿದು ಬರುತ್ತಿರುವ ಜ್ಞಾನಪ್ರವಾಹವೂ ಇದೆ. ಈ ಎರಡೂ ತಿಳುವಳಿಕೆಗಳು ಒಂದಕ್ಕೊಂದು ಸಂಧಿಸಿ ಬೆಳಕನ್ನು ಉಂಟು ಮಾಡಿವೆ. ಜೊತೆಗೆ ದಿಗ್ಭ್ರಮೆಯನ್ನೂ ತಂದಿವೆ. ಈ ತಿಳುವಳಿಕೆಗಳ ವಿವೇಕದ ವಿನಿಯೋಗ ಇಂದು ಅಗತ್ಯವಾಗಿದೆ. ಇಂಥ ವಿನಿಯೋಗಕ್ಕಾಗಿ ಹೊಸಬಗೆಯ ಶಾಸ್ತ್ರ ವಿಧಾನಗಳು ನಮಗಿಂದು ಬೇಕಾಗಿವೆ. ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆಯುತ್ತಿರುವ ಸಂಶೋಧನೆಯ ಗುರಿಯೆಂದರೆ ಈ ಶಾಸ್ತ್ರ ವಿಧಾನಗಳ ನಿರ್ಮಾಣ.

ನಾವು ನಮ್ಮ ನಮ್ಮಲ್ಲಿ ವಿಚಾರ ವಿನಿಮಯ ನಡೆಸಲು, ಒಬ್ಬರ ಅರಿವನ್ನು ಎಲ್ಲರೂ ಹಂಚಿಕೊಳ್ಳಲು ವಿಶ್ವವಿದ್ಯಾಲಯದಲ್ಲಿ ಪ್ರತಿವಾರ ಮಂಟಪ ಎಂಬ ಕಾರ್ಯಕ್ರಮ ನಡೆಸುತ್ತೇವೆ. ಅಲ್ಲಿ ಹೊಮ್ಮಿದ ವಿಚಾರಗಳು ನಮ್ಮ ಅರಿವನ್ನು ಹೆಚ್ಚಿಸಿದಂತೆ ನಿಮಗೂ ಲಾಭದಾಯಕ ವಾಗುವವೆಂಬ ನಂಬಿಕೆಯಿಂದ ಕಡಿಮೆ ಬೆಲೆಯ ಕಿರು ಪುಸ್ತಿಕೆಗಳ ರೂಪದಲ್ಲಿ ಅವನ್ನು ಪ್ರಕಟಿಸಿ ನಿಮ್ಮ ಕೈಗಿಡುತ್ತಿದ್ದೇವೆ. ಜೊತೆಗೆ ನಮ್ಮ ಉದ್ದೇಶಕ್ಕೆ ಪೂರಕವಾಗಿರುವ ಪುಸ್ತಿಕೆಗಳನ್ನೂ ಈ ಮಾಲೆಯಲ್ಲಿ ಪ್ರಕಟಿಸಿ ಜನರಿಗೆ ತಲುಪಿಸುತ್ತಿದ್ದೇವೆ. ಪ್ರಖ್ಯಾತ ಭಾಷಾಶಾಸ್ತ್ರಜ್ಞರಾದ ಡಾ. ಡಿ. ಎನ್. ಶಂಕರಭಟ್‌ರ ಕನ್ನಡದ ವ್ಯಾಕರಣ ಪರಂಪರೆ ಕೃತಿಯನ್ನು ಈ ಮಾಲೆಯಲ್ಲಿ ಪ್ರಕಟಿಸಲು ನಮಗೆ ಸಂತೋಷವಾಗುತ್ತದೆ.

**ಡಾ. ಚಂದ್ರಶೇಖರ ಕಂಬಾರ**

*ಕುಲಪತಿಗಳು*

